ಸ್ವತಂತ್ರ ಪುಸ್ತಕ ಮಾಲೆ—೧

# ಚಾಣಕ್ಯ ಸಾಹಸಂ

ಟಿ. ಕೃಷ್ಣಭಟ್, ವಿದ್ವಾನ್

೧೯೫೨

ಪ್ರಕಾಶಕರು :

ವಿಠಲ ಪ್ರಕಾಶನ, ವಿಟ್ಲ, ದ. ಕ.

ಬೆಲೆ: ರೂ. ೧.

# ನಮ್ಮ ಮಾತು

ಸಹೃದಯ ಬಾಂಧವರೇ,

ಸಾಹಿತ್ಯ ಸೇವೆಯು ದೇಶ ಸೇವೆಯ ಪ್ರಧಾನ ಅಂಗವಾದುದರಿಂದ ಇಂದು ಕನ್ನಡದಲ್ಲಿ ಹೊಸ ಹೊಸ ಸಾಹಿತ್ಯಗಳನ್ನು ನಿರ್ಮಾಣ ಮಾಡುವವರಿಗೆ ಪ್ರೋತ್ಸಾಹವನ್ನು ಕೊಟ್ಟು ಅವರ ಕೃತಿಗಳನ್ನು ಅಚ್ಚು ಹಾಕಿಸಿ, ಕನ್ನಡಿಗರ ಮುಂದಿಡುವ ಪವಿತ್ರೋದ್ದೇಶದಿಂದ ನಾವು ಈ 'ವಿಠಲ ಪ್ರಕಾಶನ'ದ ಮೂಲಕ ಸ್ವತಂತ್ರ ಪುಸ್ತಕಮಾಲೆ ಎಂದು ಪ್ರಚಾರಗೊಳಿಸುವ ಈ ವರ್ಷದ ಮೂರು ಪುಸ್ತಕಗಳಲ್ಲಿ ಮೊದಲನೆಯದಾಗಿ ಈ 'ಚಾಣಕ್ಯ ಸಾಹಸಂ' ಎಂಬ ಕೃತಿಯನ್ನು ಪ್ರಕಟಿಸಲು ಸಂತೋಷಪಡುತ್ತೇವೆ.

ಒಬ್ಬಿಬ್ಬರ ಕೈಯಿಂದ ಈಡೇರದ ಈ ಸಾಹಿತ್ಯ ಸೇವೆಯು ಯಶಸ್ವಿಯಾಗಿ ನಡೆಯಬೇಕಾದರೆ ಸಹೃದಯರಾದ ಕನ್ನಡ ಜನತೆಯ ಬೆಂಬಲವನ್ನು ಕೋರುತ್ತೇವೆ.

ಈ ಗ್ರಂಥಮಾಲೆಗೆ ವಾರ್ಷಿಕ ಚಂದಾದಾರರಾಗಿಯೂ, ಸಹಾಯಕರು ಮತ್ತು ಪೋಷಕರಾಗಿಯೂ ಕನ್ನಡಿಗರು ಸಹಕರಿಸುವರೆಂದು ನಂಬುತ್ತೇವೆ. ಇದರಲ್ಲಿ ನಾವೆಷ್ಟು ತಿದ್ದಿದರೂ, ಕೆಲವೆಡೆ ಅಕ್ಷರದೋಷಗಳು ಬಂದಿರುವುದರಿಂದ ಶುದ್ಧಾಶುದ್ಧದ ಪತ್ರಿಕೆಯನ್ನು ಹಿಂಬದಿ ಕೊಟ್ಟಿರುತ್ತೇವೆ.

ನಮ್ಮ ಪುಸ್ತಕ ಮಾಲೆಯ ಮೊದಲ ಪುಸ್ತಕವಾಗಿ, ಈ 'ಚಾಣಕ್ಯ ಸಾಹಸಂ' ಎಂಬ ಕೃತಿಯನ್ನು ಕೊಟ್ಟ ಅದರ ಕರ್ತರಾದ ಶ್ರೀ ತಾಳ್ತಜೆ ಕೃಷ್ಣ ಭಟ್ ವಿದ್ವಾನ್ ಇವರಿಗೂ, ಮುದ್ರಿಸಿಕೊಟ್ಟ ಮೋಡರ್ನ್ ಪ್ರಿಂಟಿಂಗ್ ಪ್ರೆಸ್ಸಿನ ಮೆನೇಜರರಿಗೂ ಕೃತಜ್ಞತೆಗಳನ್ನರ್ಪಿಸುತ್ತೇವೆ.

ವಿಠಲ ಪ್ರಕಾಶನ
ವಿಟ್ಲ, ದ. ಕ.

ಇತಿ,
ಸಜ್ಜನವಿನೀತ ಸಂಪಾದಕ.

# ವಿಜ್ಞಾಪನೆ.

ಚಾಣಕ್ಯ ಸಾಹಸವೆಂಬೀ ಚಿಕ್ಕ ಪುಸ್ತಕವನ್ನು ಕಳೆದ 1947ರ ಅಂತ್ಯದಲ್ಲಿ ನಾನು ಬರೆದೆನು. ಈ ಕಾಲದಲ್ಲಿ ನಮ್ಮ ರಾಷ್ಟ್ರದಲ್ಲಿ ಹರಡಿದ ವಿವಿಧ ಸಮಸ್ಯಾಜಾಲಗಳಿಂದ ನನ್ನಲ್ಲಿ ಉಂಟಾದ ಅಂತರ್ವೇದನೆಗಳನ್ನು ಚಿತ್ರಿಸುವುದೇ ಉದ್ದೇಶವಾಗಿಟ್ಟು ಚರಿತ್ರೆಯ ಆಧಾರದಿಂದ ನಾನೀ ವಸ್ತುವನ್ನು ಆಯ್ದುದಾಗಿದೆ. ಚರಿತ್ರೆಯು ಪುನರಾವರ್ತನೆಗೊಳ್ಳುವುದೆಂಬುದು ವಿದ್ವಾಂಸರ ಮಾತು. ಇದು ನನ್ನಲ್ಲಿ ನೆಟ್ಟು ಇಂದಿಗೆ ಹಿಂದಣ ಘಟನೆಗಳು ಯಾವುವು ಹೋಲುವುವೆಂದು ನೋಡಲು ನನಗೆ ಈ ವಸ್ತುವು ಯುಕ್ತವಾಗಿ ಕಂಡಿತು.

ವ್ಯಾಕರಣ ಶಾಸ್ತ್ರವನ್ನು ಉಲ್ಲಂಘಿಸಿ ಬರೆಯಲು ನನಗೊಪ್ಪುವುದಿಲ್ಲ. ರಾಷ್ಟ್ರದ ಏಕತೆಗೆ ಭಾಷೈಕ್ಯತೆಯೂ ಒಂದು ಮುಖ್ಯ ಸಾಧನವಾದುದರಿಂದ ಹರಿದು ಹಂಚಾಗುತ್ತಿರುವ ಕನ್ನಡವನ್ನು ಕೂಡಿಸಿ ಬಲ ಪಡಿಸಬೇಕಾದರೆ ಎಲ್ಲೆಡೆಗಳಲ್ಲೂ ಒಂದೇ ತರದ ಭಾಷಾ ಪ್ರಯೋಗವಾಗುವುದೊಳ್ಳೆಯದು. ಹಾಗೆಂದು ಕ್ಲಿಷ್ಟ ಪ್ರಯೋಗಗಳನ್ನು ಉಪಯೋಗಿಸದೆ ಲಲಿತವಾಗಿ ರಗಳೆಯ ಛಂದಸ್ಸನ್ನು ತೆಗೆದುಕೊಂಡಿರುವೆನು. ಇದರಲ್ಲಿ ಚಾಣಕ್ಯನನ್ನು ತಕ್ಷಶಿಲೆಯ ಗುರುಕುಲದ ಕುಲಗುರುವೆಂದೂ ಚಂದ್ರಗುಪ್ತ, ಧರ್ಮೇಂದ್ರರು ಅಲ್ಲಿಯ ಸ್ನಾತಕರಲ್ಲಿ ಸೇರಿದವರೆಂದೂ ಚಿತ್ರಿಸಲಾಗಿದೆ. ಸ್ವಾಮಿನಿಷ್ಠ ಅಮಾತ್ಯ ರಾಕ್ಷಸನ ತ್ಯಾಗ, ರಾಷ್ಟ್ರಭಕ್ತ ಸಮರಸನಾದ ಆರ್ಯ ಚಾಣಕ್ಯನ ನಿಸ್ಪೃಹ ಜೀವನವನ್ನು ಕೂಡಿದಷ್ಟು ಚಿತ್ರಿಸಲು ನಾನಿಲ್ಲಿ ಯತ್ನಿಸಿದ್ದೇನೆ. 'ತಪ್ಪೊಂದು ತಲೆದೋರದಂತೆ' ನಾನು ಯತ್ನಿಸಿದರೂ 'ಎಡೆವಾಯ್ದು ಬಂದ ತಪ್ಪಿಗೆ' ಯಾರೂ ಕೇಡೆಣಿಸಬಾರದು. ನಿರ್ಮತ್ಸರ ಹೃದಯಿಗಳಾದ ವಿದ್ವನ್ಮಣಿಗಳು ಹಿತಸೂಚನೆಯಿತ್ತರೆ ಮುಂದಕ್ಕೆ ಸುಧಾರಿಸಿಕೊಳ್ಳುವೆನು.

ಸದ್ಯ ವಿಠಲ ಪ್ರಕಾಶನದ ಸಂಪಾದಕರ ಪ್ರೋತ್ಸಾಹದಿಂದ ಕೃತಿಯನ್ನು ಅಚ್ಚು ಹಾಕಲಿತ್ತು, ನಾನವರನ್ನು ಹೃತ್ಪೂರ್ವಕ ಅಭಿನಂದಿಸುವೆನು.

ತಾಳ್ತಜೆ ಕೃಷ್ಣ ಭಟ್ ವಿದ್ವಾನ್.

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೩ | ೧೦ | ಒಂದು | ಬಂದು |
| ೯ | ೪ | ಕನ್ನಾತ್ಮ ವಿಶ್ವಸಮೆಂ | ತನ್ನಾತ್ಮ ವಿಶ್ವಾಸಮೇಂ |
| ,, | ೮ | ಪೊಗಳ್ಪ | ಪೊಗಳ್ವ |
| ,, | ೧೬ | ವಿಶ್ಪ ಮುಳ್ಪಾಸೆ | ವಿಶ್ವಮಾಳ್ವಾಸೆ |
| ,, | ೨೫ | ಹವಣಸು | ಹವಣಿಸು |
| ,, | ೨೬ | ಸಾರ್ಥದಿಂ | ಸ್ವಾರ್ಥದಿಂ |
| ೧೫ | ೧೬ | ವಿಂದ್ವಂಸನಕೆ | ವಿಧ್ವಂಸನಕೆ |
| ,, | ೧೮ | ಮಗಳಂತೆ | ಮುಗುಳಂತೆ |
| ೧೮ | ೨೪ | ಕೊಲ್ಪ | ಕೊಲ್ವ |
| ೨೦ | ೩ | ತಜ್ಜನ | ತಜ್ಜನಂ |
| ,, | ೧೪ | ಸೋಸರಿಸದೆ | ನೋಸರಿಸದಾ |
| ,, | ೧೬ | ಪಾಲ್ಲುಡಿಸೆ | ಪಾಲ್ಗುಡಿಸೆ |
| ೨೨ | ೨೨ | ಗಿಡಿ | ಗಿಡು |
| ೨೩ | ೭ | ಪೊದೊಂಟ | ಪೂದೋಂಟ |
| ೨೪ | ೮ | ಬೆಂಬಿಡದೆಂ | ಬೆಂಬಿಡದೆ |
| ,, | ೨೬ | ವೃತ್ತಿಯಂ | ವೃತ್ತಿಯುಂ |
| ೨೭ | ೭ | ಮಗದ | ಮಗಧ |
| ೨೯ | ೧೭ | ವೋಲಡ್ಡೆಸು | ವೋಲಡ್ಡೈಸು |
| ೩೧ | ೨೬ | ಕೆತ್ತಿದಲ್ | ಕೆತ್ತಿರಲ್ |
| ೩೨ | ೧೨ | ಎನಿಪನಂ | ಎನಿಪವಂ |
| ೩೮ | ೧೧ | ದುಷ್ಟತ್ಯ | ದುಷ್ಕೃತ್ಯ |
| ,, | ೧೨ | ದರ್ಷಿಸೆ | ದರ್ಪಿಸೆ |
| ೪೦ | ೧ | ಅವರರ್ಗೈರ್ಯ | ಅಮರರ್ಗೈಯ್ಯೆ |

# ಚಾಣಕ್ಯ ಸಾಹಸಂ



ಓ, ಭಾರತಾಂಬೆ! ನಿನಗಿಂತೊಂದು ದುರ್ಭಾಗ್ಯ
ಮಾದಪುದನೆಂತು ನೋಡುವೆನಿಂದು? ನಿನ್ನಲ್ಲಿ
ರಾಜರ್ಕಳೆಲ್ಲರುಂ ಕ್ಷುದ್ರರೆಯೆ, ಸ್ವಾರ್ಥಾಂಧ
ರೆಯೆ. ಧರೆಯ ವಿಪ್ರರೆಲ್ಲರ್ ತಮ್ಮ ಸಮ್ಮಾನ
ಕಾಸೆ ಪಟ್ಟಿರ್ದಪರ್, ಧನಿಕ ವರ್ಗಂ ತುಚ್ಛ
ಲೋಭಿದಲ್. ಭ್ರಷ್ಟಜೀವಿಗಳೆಲ್ಲ ಮಾನವರ್
ದಾನವರ್. ದ್ವೇಷದಿಂ ದೀರ್ಷ್ಯೆಯಿನಹಂಭಾವ
ದಿಂದೆಮ್ಮ ರಾಷ್ಟ್ರಭಾವಂ ಕೆಟ್ಟು ಪೋದತ್ತು.
ಯೂನಾನಿಗಳ ಗೃಧ್ರ ದೃಷ್ಟಿಯೀ ರಾಜ್ಯದೊಳ್
ಮುತ್ತದಿಹ ರತ್ನ ಮೌಕ್ತಿಕ ಭೂಷಣಂಗಳೊಳ್
ಬಿದ್ದತ್ತು. ತಕ್ಷಶಿಲೆಯರಸನಾ ಗ್ರೀಕರೊಳ್
ಸಂಧಾನ ತಂತ್ರಜಾಲದೊಳೆರಲೆಯಂದದಿಂ
ಬಿದ್ದು ಪೋದಂ. ಮಾಳ್ಪ ಹದನಮಾವುದು? ನಮ್ಮ
ತಕ್ಷಶಿಲೆಯೊಳ್ ನಿಂದ ವಿಶ್ವವಿದ್ಯಾಲಯಂ
ತತ್‌ಕ್ಷಣಂ ಮಣ್ಣುಪಾಲಕ್ಕುಮಿದು ನಿಶ್ಚಯಂ
ಆವುದೆಮಗೀಗ ಪಂಥಂ? ನೆರೆದ ಚಟ್ಟರೊಳ್
ಶಾಸ್ತ್ರಂಗಳಂ ಪೇಳುತಿರ್ಪುದೇ? ಸಕಲರಂ
ಸಂಗ್ರಾಮ ರಂಗದೊಳ್ ಶಸ್ತ್ರಾಸ್ತ್ರ ಮುಖದೆ ಸೀ
ಮೋಲ್ಲಂಘನಂ ಗೈವರಂ ತಡೆವ ಕಾರ್ಯದಿಂ
ಪುಚ್ಛವಣಗಜ್ಜಮುಂ ಗೈದವರ ಯೋಗ್ಯತೆಯ
ನಿರ್ಣಯಂ ಮಾಳ್ಪುದೇ ಸಂದಿಗ್ಧ ಸಮಯಮಿದು.

ಮೆರೆದಪ್ಪುದೀ ತಕ್ಷಶಿಲೆಯ ವಿದ್ಯಾಲಯಂ
ಕುರಿತೋದುವಗಣಿತರ್ ಚಟ್ಟರ್ಕಳಿಂದಿದಕೆ
ಸರಿಯಿಲ್ಲ ಜಗದೊಳಿಲ್ಲಿಂದನೇಕಾನೇಕ
ತೆರದುಜ್ಜುಗಂಗೊಂಬ ಜನರಾಗಲಿರ್ದಪರ್.
ಕವಿಗಳೋ, ಲೇಖಕರೊ, ಕೆಲವು ಜನರಾದಪರ್;
ಸುವಿಚಾರದಾ ಪ್ರಚಾರದೊಳೋಜರಾದಪರ್,
ಬುವಿಯೊಳಸಮತೆಯ ಕೈಚಳಕದಿರಿವಾಳ್ಗಳುಂ,
ರಾವುತ್ತರುಂ, ಮಲ್ಲರುಂ, ಮಹಾರಥಿಗಳುಂ,
ವಿಜ್ಞಾನ ಗಣಿತ ವಿದರುಂ ಕಂಡು ಬಂದಪರ್,
ಇಂತು ನಾನಾ ಕಲಾವಿದರಪ್ಪರಿವರೆಲ್ಲ
ರಾಷ್ಟ್ರದೇಳ್ಗೆಗೆ ಮೀಸಲಾಗಿ ಸರ್ವಸ್ವಮುಂ
ಕುಡಲಿರ್ದಪರ್. ಊರ್ಜಿತಂ ಗೈವವರ್. ಹಿಂದು
ರಾಷ್ಟ್ರಪುರುಷನ ವಿರಾಡ್ರೂಪಮುಂ ದೃಢಗೊಳಿಸಿ
ಜಗಕೆ ತೋರ್ಪರ್ ಸಹಸ್ರಾರ್ಕ ಪ್ರಕಾಶದಿಂ
ಮೆರೆಗುಮನುರಕ್ತದಿಂದೆಮ್ಮ ರಕ್ತಧ್ವಜಂ
ಪಿರಿದು ವೈಭವದಿಂದೆ ನಿಸ್ವಾರ್ಥಿ ವಿದ್ಯಾರ್ಥಿ
ಯರ ಸೇವೆಯಿಂದಿದರೊಳೇಂ ಸಂದೆಯಮುದುಂಟೆ?
ಇನಿಬರಂ ನಡೆಪಲಾರ್ ಯೋಗ್ಯ ತೇಜಸ್ವಿಯೆಂ
ದೆನಿತೊ ದಿನದಿಂದ ಲಾಂ ಯೋಚನೆಯೊಳಿರ್ದಪೆಂ
ಪ್ರತ್ಯೇಕ ವಿದ್ಯಾರ್ಥಿಯಂ ನೋಳ್ಪೆನಾರೊಳಾ
ತೇಜಮುಂಟೆಂಬುದಂ, ಸಾಹಸದ ಬಲ್ಮೆಯಂ.
ನಕ್ಷತ್ರದಾಗಸಂ ಚಂದ್ರನಿಂ ಶೋಭಿಕುಂ
ನಕ್ಷತ್ರಮೀಜಗಂ ಚಂದ್ರನಿಂ ಶೋಭಿಕುಂ

ಚಾಣಕ್ಯನಿಂತು ಯೋಚಿಸಿ ಕರೆಯೆ, ಚಂದ್ರಗುಪ್ತಂ ಬಂದು ಪೊಡಮಡುವುದುಂ 'ಚಿರಂಜೀವ' ಎಂದವನ ಗುರುಪರಸೆ, ವಿನಯದ ಮೂರ್ತಿಯಂದದಿಂ

ಕೈ ಮುಗಿದು ನಿಲ್ವುದುಂ, ಗುರುವಚನಮಿಂತಾಯ್ತು.
‘‘ವತ್ಸ! ಸಾಕಿನ್ನು ಕುರಿತೋದುವುದು ಶಾಸ್ತ್ರಮದು
ಶಾಂತಿ ನೆಲಸಿರ್ಪ ಕಾಲದೆ ಚಿಂತನಕೆ ತಕ್ಕು
ದಾಗಿರ್ದು, ದೇಶದೊಳರಾಜಕತ್ವಂ ನೆಲಸೆ,
ಶಸ್ತ್ರಮೇ ಚಿಂತನಕೆ ತಕ್ಕುದಾಗಿರ್ದಪುದು
ಯಜ್ಞಕ್ಕೆ ವೃಷ್ಟಿಯಿಂ ಬಾಧೆ ಬರೆ, ಸಮಿಧೆಗಳ್
ಯಜ್ಞಕ್ಕೆ ಮುಖ್ಯಮಿರ್ದುಂ ರಕ್ಷಿಸಲ್ಕಹುದೆ?
ತಾನಾಗ, ದಪ್ಪದೊರ್ವಾಚ್ಛಡಮೆ ಸಾಧನಂ
ತತ್ವಮಿದುವೇ ಶಾಸ್ತ್ರರೂಢಿ ಕ್ರಮಂಗಳಿವು

ಸತ್ಯ ಸ್ವಧರ್ಮ ಕಾರ್ಯಕೆ ಬಾಧೆ ಒಂದು ದಿನ
ನಿತ್ಯಮಾಕ್ರಮಣಮನ್ಯಾಯಾಪಹಾರಂಗ
ಳೆತ್ತಲುಂ ಸುತ್ತೆ, ಕತ್ತಲೆ ಕವಿಯಲಾಗ, ಸಾ
ಹಿತ್ಯಕಲೆಗಳ್ ವ್ಯರ್ಥಮೆಮ್ಮ ಕಾಪಾಡವವು
ಮತ್ತಾ ಪ್ರಕಾಶಮಂ ಕಾಣಲ್ಕೆ ಸಂಘಟಿಸಿ
ಮತ್ತತೆಯ ಪೊಂದಿ ರಾಷ್ಟ್ರಪ್ರೇಮದಿಂದೆ, ಕೈ
ಗತ್ತಿಯಂ ಝಳಪಿಸುತೆ ಶಕ್ತಿದರ್ಶಿಸುತೆ ಮುಂ
ದೊತ್ತಿ ಬಿರುಗಾಳಿಯೊಲ್ ಬೀಸುವುದು ಕಾರ್ಯಮೈ!
ರಾಷ್ಟ್ರದೊಳ್ ಸ್ವಾತಂತ್ರ್ಯಮಿಂದಿಲ್ಲ, ದುಷ್ಕರಂ
ಮೆಟ್ಟಿ, ಸ್ವರಾಜ್ಯ ಸಂಸ್ಥಾಪನಂ ಗೈದು, ಮೇ
ಲ್ಮಟ್ಟಕ್ಕೆ, ಸಕಲ ರಾಷ್ಟ್ರಕ್ಕೆನ್ನಿಸಲ್ಕಿಂದು.

ಓದುಳ್ಳ ಪಲಮಂದಿ ದಾರಿ ತಪ್ಪಿರ್ದಪರ್
ಭೇದ ಭಾವದೆ ದಳಗತಸ್ವಾರ್ಥ ಕೃತ್ಯಂಗ
ಳಿಂದೆಲ್ಲರೊಳ್ ವಿರೋಧದೆ, ಕಾರ್ಯಮಂ ಗೈವ
ಕರ್ತವ್ಯಪತಿತರಪ್ಪರ್ ಕೆಲರ್ ಪಾರ್ಥನೊಲ್
ತಿಳಿದು ತಿಳಿಯದ ಪಂಡಿತರ್ ಕ್ಲೀಬತೆಯನಾಂತು
ಯುಗಧರ್ಮದುಚಿತದಾಚರಣೆಯಾಚರಿಸದರ್

ಜಗದೊಳಗೆ ವಿದ್ಯೆ ಲಕ್ಷ್ಯಭ್ರಷ್ಟವಿಂದುದಲ್
ಕರ್ತವ್ಯ ಕರ್ಮದಾ ಜ್ಞಾನವೀವುದೆ ವಿದ್ಯೆ
ಲೋಕದೊಳ್ ವಿದ್ಯೆ ಮಾನವ ಕುಲಕೆ ತನ್ನ ಬೆಲೆ
ತನ್ನ ಜೀವನ ಮಂತು ತಾಣಮರಿಪಲ್ಕಾಗಿ
ದಾಸನಾಗಲ್ಕಲ್ತು, ಕರ್ಮಶೂನ್ಯತೆಗಲ್ತು
ಸಂಪಾದಿಸಲ್ಕಲ್ತು, ವಾದಕಿನಿಸುಮದಲ್ತು
ಗೀತೆ ಕೇಳ್ದರ್ಜುನಂ ಗೋಸಾಯಿಯಾಗಿಲ್ಲ
ಮನದ ಕಿಲ್ಬಿಷಗಳೆದು ರಣಕಣಕೆ ಧುಮುಕಿದಂ"

**ಚಂದ್ರ**—ಗುರುದೇವ! ಎಮ್ಮ ಋಷಿದರ್ಶನಮಹಿಂಸೆಯಂ. . . .''

**ಚಾಣಕ್ಯ**—''ನೀನಿಂತು ಋಷಿಗಳುಂ ಶಸ್ತ್ರಧಾರಣೆಗೆದುರಿ
ನುತ್ತೆ ಬಗೆವೊಡೆ ಕಲ್ತ ವಿದ್ಯೆಯೊಳಗೂನಮಂ
ದರಿದಪೆಂ ಕೌಶಿಕ ಪ್ರೇರಣದೆ ರಾಮ ಲ
ಕ್ಷ್ಮಣರಂದು ಕೋದಂಡ ವಾಂತು ವನಕ್ಕೈದಿದರ್
ಧರ್ಮಬಾಧಕರ ಕೊಂದರ್, ಯಜ್ಞನೆಗಳಲ್ಕೆ,
ನೀನರಸುಗುವರಂ ಸ್ವದೇಶ ಬಾಂಧವರೆಲ್ಲ
ಕಾತರಿಪರೀಗಳತ್ಯಾಚಾರಮಾದಪ್ಪು
ದಿಲ್ಲಿ, ಯರಮಕ್ಕಳೆಲ್ಲರ್ ಪರಸ್ಪರ ವಿರೋ
ಧಂಗೊಂಡು ನಿರ್ಬಲರ್, ಕೆಲರುದಾಸೀನತೆಯ
ಮೈಗಳ್ಳರಿನ್ನು ಸುಖಲೋಲುಪರ್ ಕೆಲಕೆಲರ್
ಶಾಂತಿ ಧರ್ಮಂಗಳನ್ನೆಲೆಗೊಳಿಸೆ ಭಾರತದೆ
ಕ್ಷತ್ರಿಯತ್ವ ಪ್ರಚಾರಂ ಗೈಯವೇಳ್ಪಪುದು
ಕರ್ತವ್ಯ ಕರ್ಮವೆಂದರಿತಿದನೆ ನೆಗಳಣ್ಣ
ಶಿಕ್ಷಣಂ ಪೂರ್ಣಮಾದತ್ತು ನಿನಗೀಗ ಗುರು
ದಕ್ಷಿಣೆಯನಿತ್ತು ಋಣಮುಕ್ತನಾದಪುದಿಲ್ಲ?"

**ಚಂದ್ರ**—''ಈ ಕಾಲ್ಗಳಂ ಕೈಗಳಂ ಶಿರಮನೆಲ್ಲಮಂ
ಬೇಕಾಗೆ ಕಡಿದರ್ಪಿಪೆಂ ವಿಕಲ್ಪನೆಯಿಲ್ಲ.''

**ಚಾಣಕ್ಯ**—"ಚಂದ್ರಗುಪ್ತನ ಕಡಿದ ಸಿರಮೆಮುಗದೇಕೆ? ನಾಂ
ರುಂಡಮಾಲೆಯ ರುದ್ರನಲ್ತು, ರಾಷ್ಟ್ರವಿಘಾತ
ಗೊಂಡೆಳ್ದ ಪರ್ಬುವಾ ತತ್ವ ಭೇತಾಳದಾ
ರುಂಡಮಂ ಚೆಂಡಾಡಿ, ತಾಂಡವಾಟೋಪಮಂ
ಗೊಂಡೆಮ್ಮ ಪರಮ ರಾಷ್ಟ್ರಧ್ವಜಕೆ ರಕ್ತದಿಂ
ದನುರಕ್ತಿಯಂ ಗಳಿಸಿ ಭಾರತೀಯತೆಯಿಂದೆ
ಶೀಲಯುತರೆಲ್ಲರಪ್ಪಂತೆಸಗಿ, ಸಂಘಟಿಸಿ,
ಸ್ವಾತಂತ್ರ್ಯ ವೈಭವಂ ಶೋಭಿಪಂತಾಗಿಪೊಡೆ
ಬಲವಂತನಾಗಿ ಬದುಕಿರೆ ಬಯಸು ಮನದೊಳಗೆ
ಸಾಯಲ್ಕೆ ಕಲಿವುದೇಂ? ಸಮಯಕ್ಕೆ ಬರ್ಪುದದು
ಶೂರನಾಗುತೆ ಗೌರವದೆ ಬದುಕೆ ಯತ್ನಿಪುದು
ಆಂ ಕಾಂಬ ರಾಷ್ಟ್ರಭವನಕ್ಕೆ ಪಂಚಾಂಗವಿದು
ಎನ್ನದೆನ್ನದೆ ಎಮ್ಮದೆಂಬ ಭಾವಂ ಮೂಡಿ
ತನಗಾಗಿ ತಾನಲ್ತು, ರಾಷ್ಟ್ರಕ್ಕೆ ತಾನೆಂದು,
ರಾಷ್ಟ್ರದೇಳ್ಗೆಯೆ ತನ್ನ ಮೇಲ್ಮೆಗಾಸರೆಯೆಂದು,
ಸಂಘಮಯ ಜೀವನಮನೆಲ್ಲರುಂ ನಿರ್ವಿಸುಗೆ.
ಬಿಂದು ಬಿಂದುವೆ ಸೇರಿ ಸಾಗರಮುದಪ್ಪಂತೆ
ಬಂಧು ಭಾವದೆ ಸಕಲರಿಂಬೆರೆದು ಮುಂದಿಲ್ಲಿ
ಶಕ್ತಿಶಾಲಿಯೆನಿಪ್ಪ ರಾಷ್ಟ್ರಪುರುಷನ ನಿಲಿಸಿ,
ವಿಶ್ವದಲ್ಲೆಲ್ಲ ಗೌರವದಿಂದೆ ಮೆರೆಯಲ್ಕೆ,
ವ್ಯಕ್ತಿತ್ವಮಂ ಕಳೆದ್ದು ತತ್ವನಿಷ್ಠೆಯ ಪೊಂದು"

**ಚಂದ್ರ**—'ಆರ್ಯ! ಮುಂದೇಂಗೈಯಲಿರ್ದಪುದೊ? ಪೇಳ್ದಪಿರೆ?'

**ಚಾಣಕ್ಯ**—"ಬರ್ಪುದಂ ಕೇಳದಿರದೇಕೆಂಬೊಡೀ ವಿಷ್ಣು
ಗುಪ್ತಕಾರ್ಯದೆ 'ಏಕೆ' ಎಂಬುದಂ ಕೇಳದಂ
ಕವಿತೆಗೈವುದದಿರ್ಕುಮಾಮೊರ್ಮೆ ಕವಿತೆಯಾ
ಭಾವವಾಕಾರದಿಂದೆದೆ ನಿಂದ ಕಾಲದೊಳ್

ಕವಿತೆಯದು ಸಫಲತ್ವಮಂ ಪೊತ್ತೆ ತಂದಪುದು
ಬುವಿಗೆ ಹಿತಮಾಗಿಪ್ಪ ತತ್ವಪ್ರಕಾಶನಂ
ಗೈವೊಂದೆ ಲಕ್ಷ್ಯದಿಂದಾನಂದ ಮಪ್ಪಂತೆ
ಜನಕೆ ರುಚಿಯರುಚಿಗಳ್ ದೇಹಕ್ಕೆ ತಕ್ಕಂತೆ
ಬುದ್ಧಿಬಲಕನುಸಾರಮಾಗಿಯಪ್ಪುದರಿಂದೆ,
ಸರ್ವರಂ ಮೆಚ್ಚಿಸಲ್ಕೆಂತು ಸಾಧ್ಯಂ? ತಿಳಿಯೆ
ಸರ್ವಹಿತ ಲಕ್ಷ್ಯಮೇ ಕಾರ್ಯವೆಂದಪೆನೀಗ
ರೋಗಕ್ಕೆ ಕೈಪೆ ಮದ್ದುಂ ಹಿತಮೆ ಅಪ್ಪಂತೆ
ನೀಗಲ್ಕೆ ರಾಷ್ಟ್ರರುಜೆಯಂ ಕವಿತೆ ಸಲ್ವುದಿದು
ಆರ್ಯ ಚಾಣಕ್ಯ ಕವಿತಾ ಜಾಹ್ನವೀ ಜಲಂ
ಕಾರ್ಯರಂಗಕ್ಕೆ ಬುದ್ಧಿಯ ಶುದ್ಧಿಯಂ ಗೈದು
ಸೂರ್ಯತೇಜಮನಿತ್ತು ಲೋಕಮಂ ಬೆಳಗಿಕುಂ
ವೀರ್ಯತ್ವದಿಂ ಗುಣದಿನ ದ್ವಿತೀಯತೆಗಳಿಂ.'

**ಚಂದ್ರ**—"ಎನಗೊಂದುಮರ್ಥ ಮಾದಪುದಿಲ್ಲ ಗುರುದೇವ!"

**ಚಾಣಕ್ಯ**—ಅರಿಯುವಾವಶ್ಯಮಿಲ್ಲಂ ಜಗದೆ ಚಾಣಕ್ಯ
ನರಿತಮರಿತವರಿಲ್ಲ; ಭಗವಂತನಲ್ಲದೆಯೆ
ಸಮಯ ಮರಿಪುಗು ಮೆಲ್ಲ ಮನುಜರ್ಗೆ ಬಂದದಂ
ಸಮಮಸಮ ಮೆನ್ನದಿರ್, ಪೇಳ್ದಂತೆ ಕೇಳೀಗ,
ಬೆಮೆಪಡದೆ ಮಗಧರಾಜ್ಯಕ್ಕೈದು; ಗುರುಕುಲ
ಕ್ರಮಮಂ ವಿಸರ್ಜಿಸುತೆ, ಸಕಲರಿಲ್ಲಿಂದೈದಿ
ಸುಮನಸರ್ ವಿಕ್ರಮರ್ ದೇಶದೆಲ್ಲೆಡೆಯೊಳಿ
ನ್ನೆಮಗೆ ಕಾರ್ಯಾನುಕೂಲಂಗೈವ ತೆರಮೆನ್ನ
ತಂತ್ರಜಾಲಮನೆಲ್ಲರಂತರಂ ನಟ್ಟಪುದು.

೨

ಅತಿಯಾದುದಾವುದುಂ ಗತಿಗೆಟ್ಟು ಪೋಗುಗುಂ
ಸತತಮಿದು ಲೋಕದೊಳಗಿರ್ಪ ಮಾತಕ್ಕುಗುಂ
ಬಲಿಯ ರಾವಣನ ಕೌರವನ ರಾಜ್ಯಂ ಪೋಗ
ಲತ್ಯಾಶೆ, ಯತಿಕಾಮ ಮತಿಲೋಭ ಮಾಯ್ತಲ್ತೆ?
ಭಾರತದೊಳತ್ಯಂತ ಸುಖಮಿರ್ದ ಕಾರಣಮೆ
ಈರೀತಿ ಕಷ್ಟಮುಂದುರ್ದಿನಮುಮಿಂದಾಯ್ತು.
ವಿಪುಲ ವೈಭವಮಿರ್ದುದಾದಿನದೆ ಭಾರತಕೆ
ಸುಖನಿದ್ರೆಯಂದಳಿದು ಕರ್ತವ್ಯಶೂನ್ಯದಿಂ
ಜಗದೆ ಗುರುತನಮಿರ್ದುದಂ ಕಳೆದುಕೊಂಡತ್ತು.

ಅಂದಾಯ್ತು ವಿಪ್ಲವಂ ಸೋದರರ ಯುದ್ಧದಿಂ
ಗೊಂದಲಂಗಳ್ ಪೆರ್ಚೆ, ವೀರರ್ಕಳುಂ ಯುವಕ
ವೃಂದಮುಂ, ಕವಿಗಳುಂ ಮೊದಲಾಗೆ ರಾಷ್ಟ್ರ ಸಂ
ಬಂಧ ದೇಳ್ಗೆಗೆ ಸಲ್ವ ಸಕಲರುಂ ಸಮರದೊಳ್
ಸಂಪಣಿಸಿ ಯಜ್ಞಸಮಿಧೆಗಳಂತೆ ಪೊತ್ತಲಂ
ದಿಂದೆ ಭಾರತಕೆ ಸಮ್ರಾಜತ್ವಮಿಲ್ಲಾಯ್ತು
ಸಿಂಧುವಿಂದೀಚೆಯೊಳೆ ನಿಂದುದೆಮ್ಮುಳ್ಳಾಳ್ಕೆ.

ಮುಳ್ಳೊಳಗೆ ಪುದುಗಿ ಗಾಯಂ ಕೂಡಿ ಬಂದೊಡಾ
ಮುಳ್ಳೊಳಗೆ ಕೇಡುವುಟ್ಟಿಸಿ ಕೆಡಿಸದಿರ್ದಪುದೆ?
ಪಟ್ಟ ಸಂಪತ್ತಧಿಕಮಿರ್ದು ಸುಖಮಿರ್ದೊಡಂ
ರಾಷ್ಟ್ರಧರ್ಮ ಭ್ರಷ್ಟತನ ಮೊಳಗೆ ನಟ್ಟಿತ್ತು.
ಏನೆಂಬೆನೆಂದಿನಾ ಮಗಧರಾಜ್ಯದ ಸಿರಿಯ
ಭೂರಮಾದೇವಿ ತನ್ನಾಭರಣಮೆಲ್ಲಮಂ
ತಂದಲ್ಲಿಗಡಕಿದಳೊ! ಪಿಂದೆ ದೇವಾಸುರರ್

ಕೂಡಿ ಕಡಲಂ ಕಡೆಯೆ ದೊರೆತ ಸರ್ವ ಸುವಸ್ತು
ವಿಂದಲ್ಲಿ ರಾಶಿಯೊಟ್ಟಿರ್ದಪುದೊ! ಎನೆ ಮಹಾ
ಪದ್ಮ ಸಂಖ್ಯೆಯಿನಲ್ಲಿ ಹೊನ್ನು ಕೂಡಿರ್ದತ್ತು.
ಬಡವರೆಂಬುವ ಶಬ್ದಮೇ ಇಲ್ಲದೊಂದು ಸುಖ
ಶಾಂತಿಯಲ್ಲದೆ ಬೇರೆ ತಂಟೆಗಳ್ ತಾಮಿಲ್ಲ.
ಜನಭಯಮೆ ಇಲ್ಲ, ವಿಭವ ಪ್ರಭಾವಂಗಳಿಂ
ಸುರಲೋಕಮದುವೆ, ಲೋಗರ್ಕಳಮರರ್ ದೇವಿ
ಯರ್ ಚೆಲ್ವಿನೊಳ್ ರಂಭೆಗಳ್ ದೇಶದೇಶದಿಂ
ಬಂದದರ ಮುಖ್ಯಪಟ್ಟಣಮಪ್ಪ ಪಾಟಲೀ
ಪುತ್ರ ನಗರಕೆ ಯಾತ್ರಿಕರ್ ಕಂಡು, ಹೌಹಾರಿ
ಬೆಗಡುಗೊಳ್ವರ್, ಚಂದ್ರಕಾಂತದಿಂ ಬೀದಿಗಳ್
ಶೋಭನಂ ಪ್ರಾಸಾದ ಪಂಕ್ತಿಗಳ್ ರತ್ನ ಚಿ
ತ್ರಂಕೆತ್ತು ಮಿರುಗುಗುಂ, ಲೋಕಮೇ ಪೊಸತೆನಲ್
ರಮ್ಯಮುದ್ಯಾನಂ ವಸಂತನಾಡುಂ ಬೊಲಂ
ಬಯಕೆ ಪೊಲದಿಂ ತುಂಬಿ ಸುರಕುಜಂ ಬೇಡಾಯ್ತು
ಪುರುಷಾರ್ಥ ಶೀಲರಿಂ ಮೆರೆದಿರ್ದ ನಾಡದ
ಕ್ಕರಸು ನಂದಂ ಕೇನೆಪೂವಂತೆ ಪುಟ್ಟಿದಂ.
ತನ್ನ ದುರ್ಗುಣದಿಂದೆ, ಸಕಲರ್ಗೆ ತಲೆಶೂಲೆ
ಗೀಡಾಗಿ, ಲೋಕಪೀಡಕನಾ ಮದಾಂಧನಂ
ಚಾಣಕ್ಯನೊರ್ಮೆ ಸನ್ಮಾರ್ಗಕ್ಕೆ ತರಲೆಂದು
ಪೇಚಾಡಿ ನೋಡಲವಮಾನಮಂ ಗೈಸಿದಂ
ಹುತ್ತದುರಗನ ಬಾಯ್ಗೆ ಕೈಯಿಾವ ಮೂರ್ಖನೊಲ್
ಮುತ್ತ ಚಾಣಕ್ಯನಾ ಜುಟ್ಟಿಂಗೆ ಕೈಯಿಕ್ಕಿ
ತಲೆಯಿರದೆ, ತಲೆಗೆಕೊಂಡಂ ಸಂಚಕಾರಮಂ

'ನಂದನಂ ಕೊಂದು ಹಿಂದುಸ್ಥಾನದಲ್ಲೊಂದೆ
ಚಂದ್ರಗುಪ್ತನ ಚಕ್ರವರ್ತಿತ್ವಮಂ ಗೈದು,

ಮುಂದೆ ರಾಷ್ಟ್ರಾಭ್ಯುದಯವೊಂದಲೋಡನೀ ಶಿಖಾ
ಬಂಧಮಂಗೈವೆ'ನೆಂಬೊಂದು ಪ್ರತಿಜ್ಞೆಯಿಂ
ಸಂದ ಚಾಣಕ್ಯನಾ ಧೈರ್ಯಮೇಂ! ಸಾಹಸಂ
ತಂದ ಕನ್ನಾತ್ಮ ವಿಶ್ವಸಮೆಂ ಧೃತಿಯೇನೊ?
ಬಲ್ಲಿದಂ ಸರ್ವೋಪಕಾರಿಯಾದಪನೆಂಬ
ಸೊಲ್ಲಿಂಗೆ ತಿರುಳಿಲ್ಲ ಪುರುಳಿಲ್ಲ ಮರುಳೆಲ್ಲ
ಬಲ್ಲಿದಂ ಕೆಡುವಂಗೆ ಮಾರಿಯಾ ಮೂರಿಯೇ.
ಸರ್ವರಂಜನಮೆನಿಪ ಬಲ್ಲಿದನ ಪೊಗಳ್ಪುದೇಂ?
'ಅಲಕ ಸುಂದರನ' ರಣದುಂಧುಭಿಯಮೊಳಗಿಂಗೆ
ಮತ್ತೆ ಗ್ರೀಕರ ಮಹಾ ಸೈನ್ಯಸಾಗರ ಭರತ
ವೆತ್ತು ತಡಿವಾಯ್ದು ವಿಸ್ತರಿಸು ತೊತ್ತರದೆನು
ಗ್ಗೊತ್ತಿ ಚಿಕ್ಕರಸರಾ ನಾಡೆಳೆದು, ಬೊಕ್ಕಸಂ
ಗಿತ್ತು, ತಮ್ಮಾಧಿಪತ್ಯಕ್ಕೆ ಕೂಡಿಸಿ, ಮುಂದೆ
ಕುತ್ತುತ್ತೆ ಸುತ್ತುತ್ತೆ ಕುತ್ತದೊಲ್ ಪರ್ಬುತ್ತೆ
ಬರೆ ಮುಂದೆ ಮುಂದಕ್ಕೆ ಗ್ರೀಕರಸಿನೊಳಗಾಗ
ಕತ್ತಿಯಿಂ ವಿಶ್ವಮಾಳ್ವಾಸೆ ಪಿರಿದಾಗಲೊಡ
ನಿತ್ತ ಹಿಂದೂದೇಶ ರತ್ನಕೋಶದೊಳಾಸೆ
ಹತ್ತಿ ಬಂದೊಡೆ, ಪುರೂರವನ ಗಜಸೈನ್ಯಮೇ
ನೆತ್ತರದೊ! ನೆತ್ತರಂ ತರಿದಿರಿದು ಸುರಿಸೆ, ನು
ಗ್ಗೊತ್ತಿ ಹಿಂದೂ ಭಟರ್ ಭಟರ ದರ್ಪಮನಿಳಿಸೆ,
ಕಿತ್ತುಕಾಲ್ಕೈಗಳಂ ಜೋಡಿದಂ ಕೋಡಿದಂ
ಸತ್ತು ಬದುಕಿದೆನೆಂದು ಸಂಧಿಗೈದೋಡಿದಂ.

ಝೇಲಂ ನದೀತಟದೆ ಯೂನಾನಿ ವೀರನಂ
ಸೋಲಿಸಿ ಪುರೂರವಂಗರ್ವಿಷ್ಟನಾಗಿಯಾ
ಮೇಲೆ ಸಾಮ್ರಾಟನಾಗಲ್ಕೆ ಹವಣಸುತಿರಲ್
ಮೇಲಪ್ಪುದುಳಿದುದಿತರರ್ಗವನ ಸಾರ್ಥದಿಂ.

ಪಂಚನದಿಯ ಪ್ರದೇಶದೊಳೆಲ್ಲ ಕಿಂಚಿತ್ತು
ಕಿಂಚಿತ್ತು ರಾಜ್ಯಮಂ ಹಂಚಿ ಯಾಳ್ವರಸುಗಳ್
ಹಂಚು ಹಂಚಾಗಿ ಪುಡಿಯಾಗಿ ಪೋದರ್; ಪರರ
ವಂಚನೆಯ ಯುದ್ಧದೊಳ್ ತಮ್ಮ ಭಿನ್ನತ್ವದಿಂ.
ನಿರ್ಬಲ ಮನೋಭಾವರೋಗದಿಂ ಕೃಷರಾಗಿ
ಮಾನವತ್ವಮನೆ ಕಳೆದರ್ಗೌಷಧಮದುಂಟೆ?
ಚಾರಿತ್ರ್ಯಕುಂದಿರ್ದು ಮಾನಕಳೆದಿಂದಿನೊಳ್
ದೀನರುಂ, ಹೀನರುಂ, ಪತಿತರುಂ, ತಾಮಾದ
ವಿಕ್ರಮ ವಿಹೀನರಾಕ್ರಮಿಪರಂ ತಡೆಗೆಂತು?
ಚಕ್ರವರ್ತಿತ್ವಮಿಲ್ಲದೆ ಪರಾಕ್ರಮಮೆಂತು?
ಭಾರತಂ ಸೂರೆಯಪ್ಪುದೆ? ಎಂದು ಪ್ರತ್ಯೇಕ
ವೀರರಾಷ್ಟ್ರೀಯನೊಳ್ ಚಿಂತೆ ಬೇರೂರಿತ್ತು.

ಚಾಣಕ್ಯನಾಪ್ರಾಂತದಲ್ಲಿ ಸಂಚರಿಸುತ್ತೆ
ಜಾಣಿಂದೆ ಸಂಘಟಿಸಿ ಬಲವಡಿಸೆತೊಡಗಿದಂ.
ತನ್ನಾತ್ಮಬಲದೆ, ನಿಸ್ವಾರ್ಥಸಾಮರ್ಥ್ಯದಿಂ
ಚೆನ್ನಾದ ರಾಷ್ಟ್ರಭಾವನೆ ಬರ್ಪವೋಲೆಸಗು
ತನ್ಯೋನ್ಯ ಸಮವೇದನಾ ಭಾವಮೆಸಗಿದಂ.

ಆಗಳಾ ಪ್ರಾಂತಕ್ಕೆ ಮುಂದಾಳದಾರೆಂಬ
ಕೂಗೇಳೆ, ಚಂದ್ರಗುಪ್ತನನೊಡನೆ ಕರೆತಂದು
ಲಾಘವಿತಹಸ್ತನುಂ ಸ್ವಸ್ಥನುಂ ಮುತ್ತನು ಮ
ದಾಗಿರ್ಪನಿವನೆನಲ್ಕುತ್ತರೋತ್ತರ ಮಾಯ್ತು.
ಚಕ್ರಾಧಿಪತ್ಯದಿಂದೇಕತ್ವದೂರ್ಜಿತದ
ವಿಕ್ರಮದ ಸಾಮ್ರಾಜ್ಯ ಸಂಸ್ಥಾಪನಂ ಗೈವು
ದಾಸೆ ಚಾಣಕ್ಯಂಗೆ ಬಾಸೆಗೈದಿಹ ನದಕೆ.
ಅದೆ ಚಿಂತೆಯದೆ ಮಾತು; ಕಾರ್ಯಮಿನ್ನದರೊಳೇ.
ನಿದ್ರೆಯಿಲ್ಲಾಲಸ್ಯ ಮಿದ್ದುದಿಲ್ಲಂ. ಪಸಿವು

ಬಾಯಾರ್ಕೆ ಬೇನೆಗಳ ಗೊಡವೆಯೊಂದುವದಿಲ್ಲ.
ಧರ್ಮೇಂದ್ರನೆಂಬ ಶಿಷ್ಯನದೊರ್ವ ಕೈಮುಗಿದು—
"ಬಿನ್ನಪಂ ಆರ್ಯ! ಗುರುವರ್ಯ!! ಸೊರ್ಕ್ಕಿಂ ತಮ್ಮೊ
ಳಿದಿರ್ನಿಂದ ರಕ್ಕಸರ್ ನೇತ್ರಾಗ್ನಿಯಿಂದೆ ಬೇ
ಗುದಿ ಗುದಿವರೋರೊರ್ವ ಭಸ್ಮಮೇ ಆದಪರ್
ಬದುಕುವರ್ ತಮ್ಮ ನೀತಿಯ ನಾಂತ ಕಾಲದೊಳ್
ವಿಧಿಕಲ್ಪ ಪರ್ಯಂತಮೆಂಗೆಲ್ಲ ಬಲ್ಲಿದರ್.
ಹೆದರುವೆಂ ಕೇಳಲೀದಿನ ದುಗುಡಮೇನೆಂದು
ಯೋಚನಾಮಗ್ನರಿಂತೇತರಿಂ ಪೇಳ್ವಪಿರಿ?"
ಚಾಣಕ್ಯ—"ವತ್ಸ! ಚಾಣಕ್ಯನೊಂದಪರಿಮಿತ ನಿರ್ಬಲಂ."
ಧರ್ಮೇಂದ್ರ—"ಶಾರದಾದೇವಿಯವತಾರ! ಸಕಾಲಾಗಮದ
ಸಾರ ನೀರಾಕರಾ! ಶಾರದಾ ಭ್ರವಿಚಾರ!
ವೀರ ರಾಜಕಿರೀಟ ರತ್ನಪ್ರಭಾ ಪಾದ
ವಾರಿಜಾತಾ ಪೂತನಾದ ಚಾಣಕ್ಯಂಗೆ
ಸೇರಲ್ಕಸಾಧ್ಯಮಲ್ತೇ ನಿರ್ಬಲಂ ಪರ್ಬಿ?
ವಿಾರಿತ್ತು ಸಂದೆಯಂ ನಂಬಲರ್ಹಮಿದಲ್ತು."
ಚಾಣಕ್ಯ—"ಶಾರದಾದೇವಿಯವತಾರ ಮಿಂದನ್ಯರಂ
ಸಾರಿ, ಕೃಪೆಯಂ ಕೋರ ಬೇಕಾಯ್ತು ದುರ್ದಿನಂ!"
ಧರ್ಮೇಂದ್ರ—"ದೇವ, ಆವಾಚಾರ್ಯರಾ ಸ್ಥಾನಮಾನಂಗ
ಳಾವಗಂ ಶಿರದೆ ರಾಜರ್ಕಳಿಟ್ಟಪರ್ಸೈಸೆ!"...
ಚಾಣಕ್ಯ—"ಶಿರದೊಳೆಂದೆನವೇಡ. ಪುರದೊಳೆನೆ ಯುಕ್ತಮುದು.
ದೊರೆಗುಂ ಸಭಾಸ್ಥಾನದೊಳ್ ಸ್ಥಾನಮುವರಿಂದೆ."
ಧರ್ಮೇಂದ್ರ—"ರಾಜ ಸಭೆಯೊಳ್ ಸ್ಥಾನ ಮಾತ್ರಮೇ ಪ್ರಾಪ್ಯಮೋ?"
ಚಾಣಕ್ಯ—"ಪೊಗಳ್ವ ಜನಕೆನಿತೊ, ನಟನಟಿಯರ್ಕಳಿಂಗೆನಿತೊ."
ಧರ್ಮೇಂದ್ರ—"ಶಿವಶಿವಾ!"

**ಚಾಣಕ್ಯ**—"ರಾಜರ್ಕಳನ್ನೋಪ ಕರಣದೋಲ್
ವಿದ್ವಾಂಸರುಂ ಮನೋರಂಜನಕ್ಕೆಯೆ; ಎಂದು
ವಿದ್ಯೆಯಂ ಬಿಡುವಿರ್ಪ ಸಮಯಕ್ಕೆ ಬಿಟ್ಟಿಹರ್.
ಮನ್ನಿಪಂ ರಾಜ ನೆಮ್ಮುವನೆಂದು ಕಲ್ಪಿಗಳ್
ಮೈಮರೆಯುತಾನಂದವಡುತೆ ನಿಷ್ಕ್ರಿಯರಹರ್.
ರಾಜನೆಂಬುದವೊಳ್ಳೆ ಪಕ್ಕಿಗಳ್. ಚೆಲುವಾಗಿ
ಮಾತಾಡುವುದರಿಂದ ಬೇಸರಂ ಪೋಕೆಂದು
ಗಿಳಿಪುರುಳಿಗಳ ಬೆಲೆಯೆ ವಿದ್ಯೆಯುಳ್ಳರ್ಗಿಂದು."
**ಧರ್ಮೇಂದ್ರ**—"ರಾಜ್ಯಕಾರ್ಯದೊಳವರ ಮಾತಿಂಗೆ ಬೆಲೆಯಿಲ್ಲ
ದಾಸ್ಥಾನವುಗಲೇಕೆ? ಮೂರ್ಖರಂ ಪೊಗಳಲ್ಕೆ."
**ಚಾಣಕ್ಯ**—"ಸ್ವಾರ್ಥ ಸುಖವೊಂದೆಕಾರಣಮಪ್ಪುದಿನ್ನದಕೆ.
ಬಲ್ವಿಜ್ಜೆಯುಳ್ಳರೇಗಳ್ ರಾಜಸಭೆಗೆ ಬಂ
ದಲ್ಲೆಲ್ಲರಂ ಮೋಹಿಸುತ್ತೊಲಿಸೆ ಕಬ್ಬಮಂ
ಶೃಂಗಾರ ಯುಕ್ತದಿಂದೊರೆದು, ಕರ್ತವ್ಯದೊಂ
ದಂಗಮಂ ಮರೆಸಿ ಪೆಸರ್ವಡೆಯಲ್ಕೆ ಬಯಸುವರ್
ಕಬ್ಬಮಂ ಪೇಳ್ವುದಾ ರಾಜರ್ಕಳಿಂದೊಂದು
ಹಬ್ಬದೂಟಕ್ಕಾಗಿ. ಲೇಖಕರ ಲೇಖನಂ
ಗೊಂಬೆಯಾಟಂ. ಚಿತ್ರಕರ್ ಚಿತ್ತವೃತ್ತಿವೊಲ್.
ಸೂಚಿಯಗ್ರಂ ಬಗ್ಗಿವೋದೊಡದನನುಸರಿಪ
ದಾರಂಗಳುಂ ದಿಕ್ಕು ತಪ್ಪುವಂತಿಂದೆಲ್ಲ
ಸಾಹಿತಿಗಳಾಚಾರ ಶೀಲರಲ್ಲದರಿಂದೆ
ಸಾಹಿತ್ಯ ಹಿತ ಪಥಭ್ರಷ್ಟಮಾಯ್ತುದರಿಂದೆ
ಸಂಸ್ಕೃತಿಯೆ ಕೆಟ್ಟು, ರಾಷ್ಟ್ರದ ಜೀವನಂ ಪೋಯ್ತು.
ಜನರ ಜೀವನ ಚಿತ್ರಣಂಗಳೇ ಸಾಹಿತ್ಯ
ಮೆನಿಪೊಡಂ ಭೂತಕಾಲೀನ ಚಿತ್ರಂಗಳಂ
ಘನದುಜ್ವಲದ ಭವಿಷ್ಯಂಗಳಂ ಚಿತ್ರಿಸುತೆ

ಜನಮನೋಹ್ಲಾದಮುಂ ಹಿತಮುಮಾಗಿರವೇಳ್ಪು
ದಿಂತಪ್ಪ ಗುಣಮಿಲ್ಲದಿರ್ಪ ಸಾಹಿತಿಗಳಿಂ
ಶಾಂತಿ ಸುಖ ಮಾದಪುದೆ? ಮರ್ಯಾದೆಯುವರ್ಗಹುದೆ?
ಅತಿದುರಾಶೆಯವರ್ಗೆ ರಾಜಸನ್ಮಾನಕ್ಕೆ
ಜತೆಜತೆಯ ಬೆಳ್ಳಿಬಂಗಾರಂಗಳೊಡವೆಗಳ್
ಮತಿಗೆ ನೆಟ್ಟಿರ್ದ್ದ, ಬೋಧಂಗಳೆದು ಬೊಗಳ್ವುದೇ
ಗತಿ ವಿದ್ಯೆವಡೆದ ಕರ್ಮಕ್ಕೆನಲ್ ವ್ಯರ್ಥಮದು.
ವಿದ್ಯೆ ಸನ್ಮಾನಕೆಂದಲ್ತು, ತಿಳಿವಿಂಗಾಗಿ
ವಿದ್ಯೆ ಬೋಧಕ್ಕೆ, ಸ್ವತಂತ್ರತೆಯನೀಯಲ್ಕೆ.
ವಿದ್ಯೆ ಮೋಕ್ಷಕೆ, ತತ್ವವರಿಯೆ, ಜನಜಾಗೃತಿಗೆ.
ಮೃಗ ಭಾವದಿಂದೆ ಮಾನವ ಭಾವಮಿತ್ತು, ಮೇ
ಲ್ಬಗೆಯಿತ್ತು ದೇವತ್ವ ಮೊಡರ್ಚಲಪ್ಪುದೆ ವಿದ್ಯೆ.

ಚಾಗಮಾವಶ್ಯಕಂ ಸನ್ಮಾನವಡೆಯಲ್ಕೆ.
ಚಾಗಮುಂಗೈಯಲಾರ್ಜಿಪುದೆಮಗವಶ್ಯಕಂ.
ಪಡೆದ ಸರ್ವಸ್ವಮಂ ಬಿಡುವವನೆ ಚಾಗಿಯೊರ್
ಪಿಡಿಗೂಳಿಗಿಲ್ಲದಂ ಚಾಗಮಂ ಗೈದಪನೆ?
ಸಂಗ್ರಹಿಸಿ ಮೇಲ್ತರದ ವಸ್ತುಗಳನೆಲ್ಲಲೇ
ಸಂಗ್ರಹಿಸಿಯುಪಭೋಗಿಸಲ್ಕೆ ಮುಖ್ಯಂಶಕ್ತಿ
ಯದು ಚಾಗಮಂ ಭೋಗಮಂಗೊಳ್ಳೆ ಸಾಧನಂ

**ಧರ್ಮೇಂದ್ರ**—"ವಿದ್ಯೆಯೇ ಬದುಕಲ್ಕೆ ಸಾಧನಮದೆಂಬರಲೆ?"

**ಚಾಣಕ್ಯ**—"ಅಲ್ತಲ್ತು ವಿದ್ಯೆತಲೆಯಾಗೆ ದೇಹಂ ಶಕ್ತಿ
ಒಂದು ಬೇರೊಂದಕ್ಕೆ ಪೂರಕಂ, ಕಾರಕಂ.
ಗಂಗೆಯಮುನೆಗಳಂತೆ ವಿದ್ಯೆಯುಂ ಶಕ್ತಿಯುಂ
ಸಂಗಮಿರೆ, ಜೀವನಂ ಕಲ್ಯಾಣಕಾರಕಂ
ನಿಂಬೆನೀರ್ ಜೇನ್ನೆಯ್ಯಕೂಡಿರುಚಿಯಪ್ಪಂತೆ

ತುಸುವಾತಿನಿಂದೊಂದು ಕಥೆಯೆಂಬೆ ನಂದುದೇ
ವಾಸುರರ ಸಂಗ್ರಾಮಮಾಗುತ್ತು ಮಿರ್ಪಂದು,
ವೃಷಪರ್ವನೆಂಬವಂ ರಕ್ಕಸರ್ಗರಸವನ
ಕುಶಲವಂ ಕಾಯ್ವಗುರು ಭಾರ್ಗವನ ಸಲಹೆ ರ
ಕ್ಕಸರಗೆಲ್ಲಂ ಗೈಸುತಿರ್ದತ್ತು. ತಿಳಿಯದಿದು
ವೃಷಪರ್ವನಣುಗಿಗವಳೊರೆದಳೊರ್ದಿನ ಮಿಂತು

"ಬಡಪಾರ್ವಶುಕ್ರನಂ ಬಿಡದೆ ಪೊರೆವವರಾವೆ.
ಪೊಡವಿಯೊಳ್ ಪಿಡಿಕೂಳುವಡೆಯಲ್ಕಶಕ್ತನವ
ನೆಡೆಗಾಣದಿರ್ಪನಂತಲ್ಲದೊಡೆ ಬೇರೆ ಕ
ಲ್ತರ ಪಂಡಿತರ್ಕಳಂ ಬರಿಸೆ ಶೋಭೆಗೆ ಸಂದು
ಮೆರೆಗುಮೆಮ್ಮಾಸ್ಥಾನಮೆನೆ ಪೊರಡಲಾಚಾರ್ಯ
ನಂದು ವೃಷಪರ್ವನೆರಗುತೆ ದೈನ್ಯಭಾವಮಂ
ಪೊಂದಿ ನಿಜನಂದಿನಿಯನರ್ಪಿಸುತೆ ಸೇವೆ ಗೆಂ
ದಂದು ಶುಕ್ರಾಚಾರ್ಯ ನಿರಲೊಡಂಬಟ್ಟನ್ನೆ!
ಮುನಿವಸಿಷ್ಠಂಗೆ ರಘುರಾಜರ್ಕಳನವರತ
ವಿನಯ ಭಯಭಕ್ತಿಯಂ ಪಟ್ಟು ಕೊಂಡೆಲ್ಲಮಂ
ಮುನಿಚರಣಕರ್ಪಣಂ ಗೈದು ರಾಜ್ಯಮನೆಲ್ಲ
ಮುನಿಯ ಪ್ರಸಾದ ಮೆಂದಾಳ್ದಪರ್, ಬಾಳ್ದಪರ್.

ಆದೊಡಾ ಋಷಿಗಳೆಂದುಂ ತ್ಯಾಗಶೀಲರೆಯೆ.
ಭೋಗಮಂ ಬಿಟ್ಟು ಯೋಗದೆ ಶಕ್ತಿಪಟ್ಟು ನಿಗ
ಮಾಗಮವನರಿದು, ಜಗಮೆಲ್ಲಮಂಪುಲ್ಗೆಸಮ
ಮಾಗಿ ಕಂಡರ್. ಮನದೆ ಲೋಭಮಿನಿತಿಲ್ಲದರ್.
ಬಂತವರ್ಗೆ ಸಮ್ಮಾನಮಂದು ಚಾಗದೆ, ಗುಣದೆ,
ಶಕ್ತಿಕಾರಣದಿಂದೆ. ಶಕ್ತಿ ಪಕ್ಷಂ ಜಯಂ.
ಶಕ್ತಿಯುತನೇ ಭೋಗಿ. ಶಕ್ತಿಯಿಂದಾರ್ಜಿಸುತೆ

ಯುಕ್ತದಿಂ ಬಿಟ್ಟೊಡದುವೇ ಚಾಗ ಮಾದಪುದು.
ತಿನಲಿರದನುಪವಾಸಮುಂ ವ್ರತಮುದೆಂಬರೇಂ?
ತಿನಲಿರ್ದುಂ ತಿನ್ನದಿರೆ ತಾಪಸಂ ವೈರಾಗಿ
ಯೆನಿಪನೆನಗಿಂದು ಸ್ವರಾಜ್ಯಮುಂ ಕನಸಿಂದೆ
ನೆನಸಿಂಗೆ, ನೆನಸಿಂದೆ ಕಾರ್ಯಕ್ಕೆ, ಕಾರ್ಯದಿಂ
ಕೈಗೆ ತಂದುಂ ಸ್ವತಂತ್ರತೆಯಿಂದೆ ಚಾಗಮುಂ
ಗೈದು, ತಪಮೆಸಗಲ್ಕೆ ಬಯಕೆ. ತಾನದಕೆ ತಂ
ತ್ರದೆ ನಂದರಾಜ್ಯ ನಿರ್ಮೂಲನಮೆನಿಶ್ಚಿತಂ
ಮುಂದೆ ಬರಲಿರ್ಪ ಸ್ವತಂತ್ರ ಭಾರತಕರಸು
ಚಂದ್ರಗುಪ್ತಂ, ಗುಪ್ತಕಾರ್ಯಮೆನ್ನಿಂಪೊಂದಿ
ನಿಂದಿರ್ಪನಿಂದಲ್ಲಿ ಪಾಟಲೀ ಪುತ್ರದೊಳ್;
ಮಗಧನಂ ಗೆಲೆವೋದ ನಗಧರನ ರೂಪದೊಳ್.
ಮಗನೆ, ನೀನಿಲ್ಲಿ ಜನಜಾಗೃತಿಯನೆಸಗುತಿರ್.
ಜಗಕತರ್ಕ್ಯಮವರ್ಣ್ಯಮದ್ಭುತಮದರ್ಶಿತಂ
ಮಿಗೆ ಭದ್ರದೃಶ್ಯಂಗಳಂ ತೋರಲ್ಕೆದುವೆಂ
ಪಾಟಲಿಗೆ ಕೋಟಲೆಯ ಕೀಟ ವಿಧ್ವಂಸನಕೆ.
ಯುಗಯುಗಾಂತಂಬರಂ ಚಾಣಕ್ಯ ತಂತ್ರಮಿದು
ಮುಗಳಂತೆ ಕಂಪೇರಿಸುತ್ತೆಲ್ಲರಂ ಸೆಳೆಗೆ.

-+-+-+-+-+-

ತನ್ನರಿವೆ ಸಾಧನಂ ಕಾರ್ಯಸಿದ್ಧಿಗೆ ಸಮಂ
ತಿನ್ನು ವಿಸ್ಮರಣೆಯೆ ವಿನಾಶಕ್ಕೆ ಕಾರಣಂ.
ಕಾರ್ಯಕುಶಲರ್ಗೆಲ್ಲರ ನುಕೂಲಿಪರ್ ಸ್ವಾರ್ಥ
ಕಾರ್ಯದುರ್ನೀತನಂ ಸರ್ವರುಂ ತ್ಯಜಿಸುವರ್.
ನಂದರಾಜನ ದರ್ಪದನ್ಯಾಯಮಂ, ರಾಷ್ಟ್ರ
ವೊಂದಿರ್ದ ಹೀನತ್ವಮಂ, ಪರರ್ ಮುತ್ತಿದೊಡೆ
ಕುಂದಪ್ಪುದಂ, ಪಲವು ಜನದೋಷಮಂ, ಜಗಕೆ
ನಿಂದು ಬೋಧಿಸಿದನಾಕೌಟಿಲ್ಯನವನಾತ್ಮ
ಮೊಂದು ಬಲವೆನಿತೊ, ಕರ್ಮದ ಕೌಶಲಮದೆನಿತೊ;
ನಾತಿನೊಳ್ ಜಾಣ್ಮೆ, ನೀತಿಯರೀತಿ, ಮೇಣ್‌ಸ್ಫೂರ್ತಿ
ಮೂರ್ತಿಮತ್ತತೆಗಳಿಂ ದೇಶದೆಲ್ಲೆಡೆಯೊಳಂ
ಕಲಕಲಂ ಪರ್ಬಿತ್ತು. ಜನದೊಳುದ್ವಿಗ್ನತಾ
ನಿಲ ಮೊಳಗಿನೊಳಗೆ ಭುಗುಭುಗಿಸೆ ತೊಡಗಿತ್ತಂದು
ಉರಿಕಿರ್ಚಿನಂದದಿಂ. ಜನಮೆಲ್ಲ ರಾಜಂಗೆ
ವಿಮುಖ ಮಾದತ್ತು, ಸೈನಿಕ ವರ್ಗಮುಂಕ್ರಾಂತಿ
ಯುರಿ ಮಸಗಿಸಲ್ಕಾಸೆ ಪಟ್ಟತ್ತು, ಕೋಂಟೆಯೊಳ್
ಭರದೆ ವಿದ್ರೋಹಕಾರ್ಯಕೆ ಸಿದ್ಧವಡುತಿತ್ತು.
ಪ್ರಕಟ ರೂಪದೊಳೆಲ್ಲ ಹರ್ಷಮುಖರಿರ್ದೊಡಂ,
ವಿಕಟ ಚಿಂತೆಯಿನಳುಂಬಂ ಕುದಿವರೊಳಗೊಳಗೆ.
ಅಂದು ನಡುವಿರುಳೆಲ್ಲ ಕಡೆಯೇರು ತಗ್ಗುಗಳ,
ಕಾಡು ನಾಡೆಂದೆಂಬ, ಹಳ್ಳಿಪೇಟೆಗಳೆಂಬ,
ಗಗನಭೂಮಿಗಳೆಂಬ, ಮೇಲ್ಕೀಳ, ವಾಡಿಕೆಯ
ಭೇದಭಾವಂಗಳಂ ಪೋಗೊಳಿಸಿ, ಸಮತೆಯಿಂ

ರಾತ್ರಿರಾಜನ ರಾಜ್ಯವಿಸ್ತಾರಮಾದತ್ತು.
ಹೇಡಿಗಳ್ ನೋಡೆ ವಿವಿಧಾಕಾರದಿಂದೆ ಭೇ
ತಾಳಕೋಟಿಯುಂ ಕಾಂಬುವದ್ಭುತಮನೆನ್ನಲೇ!
ಆಗಸಕ್ಕೆದ್ದವ್ಳ್ಯೆ, ಕೋರೆದಾಡೆಗಳಿಂದೆ
ಭೀಕರಂ, ಧೀರ್ಘಜಿಹ್ವಾಗ್ರದಿಂ ನೆತ್ತರಂ
ನೆಕ್ಕುವೊಂದಾತುರಂ, ಬಿಟ್ಟತಲೆ, ಬಟ್ಟಕಣ್,
ಚುಕ್ಕಿವೊಲ್ ಪೊಳೆವಾ ಪಿಶಾಚಂಗಳಗಣಿತಂ
ಮೇಳವಿಸಿ, ನರ್ತನಂಗೈವದ್ಭುತ ಕ್ರಮಂ,
ಸಾಲೆದ್ದು ನರ್ತಿಪೊಂದೆಡೆಯೆಡೆಯೊಳೂಳುತ್ತೆ
ತಾಳಕ್ಕೆ ಸೇರದಾ ಕುಣಿತಮುವಕೊಪ್ಪೆ ಬೇ
ತಾಳಂಗಳಂ ಕನಸೊಳಾದೊಡಂ ಕಂಡವಂ
ಕಂಡ ಬಟ್ಟೆಗೆಪಾರೆ, ಕಣ್ಗುತ್ತೆ ಕಾಣದಿ
ನ್ನಂಡಲೆದು, ಭಯದಿಂದೆ ನಿವಿರೆದ್ದು, ಬೆಮರ್ಗುಮಾ
ರಾತ್ರಿರಾಜನ ರಾಜ್ಯಭಾರದಾ ಸಮಯದೊಳ್.

ಚಂದ್ರಗುಪ್ತಂ ಮಲಯಕೇತುವಿನಸೈನ್ಯಮಂ
ನಂದರಾಜನ ರಾಜ್ಯಲಕ್ಷ್ಮಿಯಂಸೆಳೆಯಲ್ಕೆ
ತಂದು ಮಂತಣ ಕಾಗಿ ಪಟ್ಟಣದೆ ದೂರದೊಳ
ಗೊಂದು ತಾಣದೆಹುರುಪಿನಿಂ ಮೌನಮಿರಲವ
ರ್ಗೆಂದ ನಾರ್ಯಂಕಾರ್ಯಭಾರಮಂಸಾಗದಿಂ:—

“ನೆರೆದೆಮ್ಮ ವೀರರೇ! ಈರಾಷ್ಟ್ರದೇಳ್ಗೆ ಚ
ಪ್ಪರಗಂಬಮಪ್ಪವರೆ, ಗುರುಕಾರ್ಯಮಿಂದಿಹುದು.
ಪಾಟಲೀಪುತ್ರ ದುರ್ಗಮದ ದುರ್ಗಮನೇರಿ,
ಧಾಟಿಯುಂ ರಾಜಾಂಗಣಕ್ಕಿಟ್ಟು, ಭವನದಕ
ವಾಟ ಭೇದಂ ಗೈವುತೊಳವೊಕ್ಕು, ಸರ್ವರೊಂ
ದಾಟೋಪಮಾಘಟಾಟೋಪಮಂ ಮೀರೆ, ನಿಂ
ದೀಟಿಭರ್ಚಿಗಳಿಂ ಕಠಾರಿ ಬಾಣಂಗಳಿಂ
ಕಾಟಕರ ಕೋಟಲೆಯ ಕೋಟೆಯಂ ಪುಡಿಗೈಯಿ

ರಾಟಮೆಂಬಂದದೆ. ವಿರಾಟ ಸಂಮ್ರಾಟನಾ
ಕೂಟಮುಂಟಾದಪುದು ಶುಭಮುಹೂರ್ತ ಮಿದ್ಯೆಸೆ.
ಗೊಡ್ಡು ಮರಮುಂಕಡಿಯುತಿತರಗಿಡುಗಳ್ಗೆಲ್ಲ
ಮೆಡ್ಡ ಮುಪ್ಪಂದದಿಂ ತೋಂಟಿಗಂ ಗೈದಪಂ.
ಜಡ್ಡು ವಿಡಿದಿಹ ರಾಜ್ಯಭಾರದಿಂ ಫಲಮುಂಟೆ?
ಕಡ್ಡಿಯೊಲ್ ಮುರಿಯಲ್ಕಸಡ್ಡೆಯಿಲ್ಲದರೇಳಿ!
ಮುದ್ಯಮತ್ತತೆ ಪೆಣ್ಣಿ ನಿಷ್ಟಂಗಳೇರಾಜ
ನುದ್ಯಮಂ, ಸುಖದೆಮೈಮರೆವಾಟ ಬೇಟಂಗ
ಳುದ್ಯೋಗಿಕುಂ, ದೇಶನಾಶನದ ಕಾರ್ಯಮಂ.
ನಿಷ್ಪ್ರಯೋಜನದಾಳ್ಕೆ ಮಾಳ್ಕೆಯಂತಡೆದಪುದು.
ಸುಪ್ರಯೋಜನದ ಸಾಮ್ರಾಜ್ಯ ಸಂಸ್ಥಾಪನಂ
ಕುಪ್ರಥಮೆ. ಕರ್ತವ್ಯಕರ್ಮ ಮಿನ್ನಿದಕಾಗಿ
ಸರ್ವಮಂಹೋಮಿಸಲ್ ಸಿದ್ಧರಾಗುತ್ತೇಳಿ
ಅಗಣಿತದೆ ಬಲಿಯಾಗಲುಂ ಸಿದ್ಧರಿಹಜಾತಿ
ಜಗದೆ ವೈಭವದಿಂದೆ ಮೆರೆಗುಮಿಂತಿಲ್ಲದಿರೆ
ಮುಗಿಗುಮಾ ನಿರ್ಬಲದಜಾತಿ. ಗೌರವದೊಳಿರೆ
ಹಗೆಗೆ ಹೆದರದೆ ಹೆಜ್ಜೆಯಗಲಕಿಡಿ ಮುಂದಕ್ಕೆ.
'ವೀರರ್ಗೆ ಬದುಕಲ್ಕೆಯೇ ಭಾರತಂ' ಎಂಬ
ಪೂರ್ವೀಯಮತಮದಂ ಸ್ಮರಣೆಗಾಗಿಪುದಿಂದು."

**ಚಂದ್ರ**—"ಆರ್ಯ! ತಾನಿದಧರ್ಮಯುದ್ಧಮೆಂದಕ್ಕಲ್ತೆ?
ಜನರೆಲ್ಲರಂಕೂಡಿ, ರಾಜನೊಳ್ ದ್ರೋಹಭಾ
ವನೆ ನಿರೂಪಿಸಿ, ಸೂಚಿಸದಿರುಳ್ ನಿದ್ರೆಯಾ
ಪನೆಯ ಕಾಲದೆ ಯುದ್ಧಮೇಂ ಧರ್ಮಯುದ್ಧಮೇಂ?
ಮನೆವುಗುವ ಕಳ್ಳತನಮುಂ ಕೊಲ್ಪಮನಮು
ಮೆನ್ನೊಳಗೊಳಗಿದನ್ಯಾಯಮೆಂದು ಕೊರೆದಪುದಿಂದು"
ಅಟ್ಟಹಾಸಂಗೈದು ಚಾಣಕ್ಯನರುಪಿದಂ
"ಅಲ್ತು ಬೆಮೆಗೊಳ್ಳದಿರಿದೇನಿನ್ನ ದುರ್ಬಲತೆ.

ಎನ್ನ ಶಿಷ್ಯನ ದುರ್ಬಲತೆ ಕೊರತೆಯೆನ್ನದಲೆ?
ಮುನ್ನಿನಿಂ ಬುದ್ಧಿಬಲದೊಳ್ ಗರ್ವವಾಂತೆನಗೆ
ನಿನ್ನನುಡಿಗೇಳ್ದೊಡಾಶಾಭಂಗ ಮಾದಪುದು.
ಕಾರ್ಯಕ್ಕೆ ಮೊದಲದರ ಪರಿಣಾಮುಮೆಲ್ಲಮಂ
ಸ್ಥೈರ್ಯದಿಂ ಧೈರ್ಯದಿಂದರಿದೆಮುಂಬರಿದಪೆಂ
ನ್ಯಾಯಮನ್ಯಾಯಂಗಳಂ ವಿಮರ್ಶಿಸಿಯೆ ಮುಂ
ದಾಯತ್ನಕಾರಂಭ ಮೆನ್ನದೆಂದರಿ-ಘನದೆ.

ರೋಗನಾಶಂ ಗೈವುದೇಂ ಧರ್ಮಬಾಹಿರಮೆ?
ಪೋಗೊಳಿಸೆ ಮರ್ದನಿನ್ನಾವ ವಿಧದಿಂ ಗೈಯ್ದೊ
ಡಾಗಧರ್ಮಂಪೋಪುದೇ? ನಿಂದಿಸುಗೆ ರೋಗಿ.
ರಾಷ್ಟ್ರ ಪುರುಷಂ ರೋಗತಟ್ಟಿ ಕಳೆಗುಂದಿಹಂ.
ಕೆಟ್ಟಿರ್ಪ ಶಾಸನದ ದುರ್ನೀತಿ ಕಾರಣಂ.
ಊರಿರವು ಬೇರೆಬೇರೆಯೆ ಪೇಳಲಿನ್ನೇಕೆ:---
ನಾರಿ ಮಾನಾಪಹಾರಂ, ಚೋರತನದವಿ
ಸ್ತಾರಮತ್ಯಾಚಾರಮಧಿಕಾರದಿಂಕ್ರೌರ್ಯ
ಮಂತು ಲಂಚಂಗುಳಿತನಂ, ಸ್ವಾರ್ಥವೃತ್ತಿ, ಕಪ
ಟಂತೋರ್ಪ ಬದುಕುಳ್ಳರಧಿಕ ಜನರೀದಿನಂ.
ಅದ್ವೈತಿಗಳ್ ವ್ಯಷ್ಟಿಯೊಳ್, ಸ್ವಾರ್ಥಕರ್ಮದೊಳ
ಗಾದ್ವೈತಿಗಳ್ ದ್ವೇಶರಾಗಂಗಳೊಳಗಿಹರ್
ಸಮವಾದಿಗಳ್ ಪರರಪೊಲ್ಲದಾನೀತಿಯಂ
ಸಮನಿಸುತೆ ಕೊಲೆ, ಕೃತಘ್ನತೆ ಮೋಸತನಮಿವಂ
ಕ್ರಮುಮಿರದನುಕ್ರಮಂಗೈಯಲ್ಕೆ ಬಯಸುತ್ತೆ
ಕುಲಧರ್ಮ ಜೀವನಂಗಳ ಪಂಥಮುಂಪಳಿದು
ಮಾನವತೆ ಮಾನ್ಯವಲ್ತೆಂದು ದಾನವರಹರ್.
ಜಾತಿಯಂ ಸಂಕುಚಿತವೃತ್ತಿಯೆನ್ನುತೆ ಬಲ್ಲ
ರೀತಿಯಿಂ ಪಳಿದದಂ ತ್ಯಜಿಸಲ್ಕೆ ಬೋಧಿಪರ್;
ಜಾತಿಯಂ ಸಂಪ್ರದಾಯಕ್ಕೆ ಪೋಲಿಸುತಿಹರ್,

ಜಾತಿ ರಾಷ್ಟ್ರೀಯ ವಾಚಕಶಬ್ದವೆಂದಪೆಂ.
ಭಾಷೇತಿಹಾಸಸಂಸ್ಕೃತಿ ದೇಶಧರ್ಮಂಗ
ಳಾಶಿಸಲ್ಕಾವ ಪೆಸರಿಂ ಸಮಾಸಂ ಪೊಂದಿ
ಭಾಷಿಪುದೊ, ತಜ್ಜನ ತಚ್ಛಬ್ದಮುಖದೆ ಜಾ
ತೀ ಶಬ್ದಮಂ ಸಮಾಸಂಗೈದು ಪೇಳಿಕುಂ.
ಸಂಪ್ರದಾಯಂ ಕಾಲದುಚಿತದಿಂ ಬಂದಿರ್ದು
ಸಂಪ್ರತಂ ಸಂಕುಚಿತಮಿರಲದಂ ಬಿಟ್ಟಪುದು.
ಇಂದಿದಂ ತಿಳಿಯದೊಂದಕ್ಕೊಂದುಗೈದುತ
ಮ್ಮಿಂದೆ ತಮಗಪ್ಪಧೋಗತಿಯರಿಯದಿರ್ದಪರ್.
ಶಾಸನದೆ ಸರ್ವರೊಳ್ ಕ್ಲೈಬ್ಯಮುಂಟಾಯ್ತೀಗ
ದೋಸಮೇಗುಣಮಲ್ತೆ ಗುಣಮೆ ದೋಸಮದಲ್ತೆ?
ಬಂದಿನಿತು ಶಾಸನದ ರೋಗದಿಂ ರಾಷ್ಟ್ರಮಂ
ಕುಂದದೋಲ್ ಕಾಪಾಡೆ ಮರ್ದರೆಯವೇಳ್ಪುದದ
ಸೋಸರಿಸದಾವವಿಧದಿಂ ಗೈಯ್ದೊಡಾತಂಗೆ
ದೋಸಮುಂಟೇ? ಪುಣ್ಯಮಲ್ಲ! ಧರ್ಮಮೆ ಅಲಾ!
ಜನನಿ ಸುಳ್ಳಾಡಿ ಪಾಲ್ಲುಡಿಸೆ ಶಿಶು ಬಳೆದಪಂ.
ರೋಗಿಯಂ ವಂಚಿಸುತೆ ಮೋಸದಿಂ ಶಸ್ತ್ರಪ್ರ
ಯೋಗಮುಂಗೈದಪಂ ವೈದ್ಯ ನೊರ್ಮೆಗೆಕ್ಕೈಪೆ
ಯಾಗಿರ್ಪಯೋಗಮಂ 'ಸಿಹಿ' ಎಂದುಪೇಳ್ದುಲೇ
ಸಾಗಿಪೊಡೆ ಗೈದಕಾರ್ಯದೆ ಪಾಪಮಾದಪುದೆ?
ಸತ್ಯಶಾಂತಿಗಳ ಸುಖ ಲಕ್ಷ್ಯಮಿನ್ನುಂಟಾರ್ಗೆ
ನಿತ್ಯಮಾತನ ಸಕಲಕರ್ಮಮುಂ ಧರ್ಮಮೈ!
ಚಂದ್ರಗುಪ್ತನೆ, ಪವಿತ್ರಾತ್ಮನುಂಕರಣಂಗ
ಳಿಂದೆ ಪರಿಶುದ್ಧನುಂ ನೀನಿರ್ದು ಕುಂದದಿರ್.
ಪೊಂದಿರ್ಪಲಕ್ಷ್ಯಮಂ ತಪ್ಪದಿರ್. ಮುಂದಿನ್ನು
ಸರ್ವರಂ ಮೋಸದಿಂ ಸುಳ್ಳಿನಿಂ ವಂಚನೆಗ
ಳಿಂದೆ ಕಷ್ಟಂಬೊಂದದಂತೆ ರಕ್ಷಿಪುದಕ್ಕೆ
ಯಿಂದೊಂದು ಸುಳ್ಳನೋವಂಚನೆಯನೋಗೈಯ್ಯ.

**ಚಂದ್ರ**—ಕಿಂತು ಸಂಬಂಧಿಗಳಕೊಲೆಮಹಾಪಾಪಮಲೆ!

**ಚಾಣಕ್ಯ**—ಕರ್ತವ್ಯ ವಿಮುಖನಾಗಲ್ಕಕೀರ್ತಿಯೆ ನಿಜಂ.
ಸ್ವಾರ್ಥದಿಂದಲ್ತಂತು ಕರ್ತವ್ಯಮಿರೆ ಕೊಲ್; ಪ
ರಾರ್ಥಮಾಪಾರ್ಥಂಗೆ ಪಾರ್ಥಸಾರಥಿಯೊರೆದ
ಧರ್ಮಮಾತಂ ಮಾತುಳಾದಿಗಳಕೊಂದಾಗ
ಧರ್ಮಕ್ಕೆ ತಪ್ಪಿದನೆ? ಪಾತಕಂಪೊರ್ದಿದನೆ?
ದುಷ್ಟಾತ್ಮರಿಂತಪ್ಪ ಬಂಧುಗಳೆಯಾದೊಡಂ
ಕುಟ್ಟಿಕೊಲ್ಲಲ್ಕೆ ಮುಂಬರಿ; ತರಿಯೆ ತವಕವಡು.
ರಾಷ್ಟ್ರಕಲ್ಯಾಣಕ್ಕೆ ವಿಶ್ವಾಸಘಾತಮ
ನ್ಯಾಯ ಮಾಮ್ಯೆಗಳ್ಳತನಮುಳ್ಳ ಪಿತನ
ಸಹಜನ ಪುತ್ರನಾದವನ ನಾದೊಡಂ ಬಲಿಯೀಯ
ವೇಳ್ಪಲ್ಲಿ ಬಂಧುತ್ವದಿಂದೆ ಪಿಂಜರಿಯದಿರ್
ಭಾರತಕೆ ಸಂಮ್ರಾಟನಾಗಲಿಂತೆಸಗಯ್ಯ"

**ಚಂದ್ರ**—"ರಾಜ್ಯದಾಳ್ಕೆಯೊಳಾಸೆಯಿಲ್ಲಾರ್ಯಗುರುವರ್ಯ"

**ಚಾಣಕ್ಯ**—ನಿನಗೆ ಬೇಕಿಲ್ಲ ಭಾರತದಾಳ್ಕೆಯಾದೊಡಂ
ತನಗೆ ಭಾರತಮೆ ನೀನರಸಾಗೆ ಬಯಸುಗುಂ.
ನಡೆಯೀಗ ಕಜ್ಜದಾರಂಭ ಸೌರಂಭದಿಂ
ದೊಡನಿನಿತು ವೀರರಿಂ, ಪರ್ವತೇಶ್ವರನ ಬಲ
ಗಡಣದಿಂ ಪೊಡವಿಯಡಿಮೇಲಕ್ಕೆ. ಮೇಲೆಯಾ
ಸಡಗರದ ವೈಭವದ ಸುಗ್ಗಿ ಜಗಕುಂಟಕ್ಕೆ.
ನಾಳೆ ಮುಂಜಾವದೊಳ್ ನಿನ್ನ ಜಯತೂರ್ಯಮಾ
ಮುಂಬೆಳಗಿನೊಳ್ ಮಂಗಳದ ತೂರ್ಯದಂದದಿಂ
ಪಾಟಲೀಪುತ್ರನಗರದ ರಾಜಗೇಹದೊಳ್
ಕಾಟಮಿಲ್ಲದೆ ಮಣಿಕಿರೀಟಮೊತ್ತಿರೆ ನೆಗಳ್ಗೆ.

—++++++—

೪

ಗುರುವಿಂದೆ ವಿದ್ಯೆ ಬರ್ಪುದು, ಪುಸ್ತಕದಿನಲ್ತು
ಗುರುವಿಲ್ಲದೋದಿನೊಳ್ ಸಂದೆಯಂ ಬರ್ಕುಮದು
ಪರಿಹಾರಮಾಗಲ್ಕೆ ಗುರುವಚನಮಂ ಪೊಂದು
ಮರುಳೆ, ಹೊತ್ತಗೆಯೋದಿ ಹೊತ್ತುಗಳೆದರ್ಥಮಂ
ಮರೆತನರ್ಥದೆ ಭಾಷೆಯಂ ವಿದ್ಯೆಯೆನವೇಡ.
ಓದರಿತದರಮನೆಗೆ ಹಾದಿಬಲ್ಲೆಯ ಬಿಡಿಸಿ
ಬೋಧ ದೀಪಂಬೆಳಗಿ ಕರೆದುಯ್ಯೆ ಗುಣವಂತ
ನಾದ ಗುರುವಿಂ ಕಲ್ತುಕೊಳ್ಳಲ್ಲದೊಡೆ ಪೋಗು
ತೇಕಾಂತದೊಳ್ ಲೋಕಚಿಂತನಂ ಗೈಯಣ್ಣ
ಬೇಕಾದ ತಿಳಿವೆಲ್ಲ ಲೋಕದೊಳಗಿರ್ದಪುದು.
ಲೋಕಪುಸ್ತಕದೊಳಗೆ ಬುದ್ಧಿಲಿಪಿಯೊಳ್ ಮಹಾ
ಶ್ಲೋಕಂಗಳಿರ್ದಪುವು ಭಿನ್ನಮೆಮಗಲ್ತವು ವಿ
ವೇಕದಿಂ ತನ್ನೊಳೋದುವುದು ಜಗದೋದಹುದು.
ಆಕಾಶಮಂನೋಡೆ ನೂಕಾಟವೇನುಂಟು?
ನೀಕಂಡುಕಲಿವೆಡೆಗೆ ಬುದ್ಧಿಯೇ ಗುರುವಹುದು.

ಗಗನ ಚುಂಬಿತ ಪರ್ವತದ ಶಿಖರಮಲ್ಲಿಂದೆ
ಬಗೆಬಗೆಯ ಬಣ್ಣದೊಳ್ ರವಿರಶ್ಮಿಯಿಂಪೊಳೆದು,
ಚಿಗಿವ ಜೀರ್ಕೊಳವಿ ತುಂತುರ್ವನಿಯ ಸೂಸಿ, ಕೆಳ
ಗುಗುವ ಬೆಳ್ನೊರೆ, ತೊರೆಯ ಜೋಗದರಜೋಗುಳಂ,
ವನರಾಜಿ ಘನರಾಜಿ ಕಾರ್ಷ್ಣ್ಯದಿಂದೆಸೆದು, ಜನ
ಕನುರಾಗಮಾಗಿರ್ಪನೋಟ, ಮಾಬಯಲೊಳಗೆ
ಮನಮೋಹಕರದೆ ಮರಗಿಡಿಬಳ್ಳಿಪುಲ್ ಪೊದ
ರ್ಗಳ ಚಿಗುರ್ಪೂವು ಪಣ್ಗಳ್ ಗೊಂಚಲಿಂಚೆಲ್ವು,

ಶಾಲೀಭರಂ ಗ್ರಾಮದೊಳ್ ಸೌಖ್ಯಸಂಪತ್ತಿ
ಶಾಲೀಕರಂ ಪೊಂದಿದಂದಮಾನಂದಮಲೆ:
ಶಾಲೀನಮಾನವ್ಯ ವೃತ್ತಿಯಿಂ ಭರ್ತಿಯಿಂ
ಶೀಲಮುಳ್ಳರ್ ಕೋಲಮಿಲ್ಲದರ್, ಸಂತತಂ.

ಹಳ್ಳಿಯೊಳ್ ಕೌಂಗುದೋಂಟಂಗಳಂ ನೋಡಲ್ಲಿ
ಕಳ್ಳಿಮುಳ್ ದಟ್ಟಡೆಗಳಿಂದಗಳ್ಗಳಂದಮಂ!
ಕೌಂಗುದೋಂಟಂ ಕನ್ನಡಕ್ಕೆ ಪೂದೊಂಟಮಾ
ತೆಂಗು ಚೆಂದೆಂಗು ಪಲಸುಗಳೊಳೊಳ್ಳಿಯ ಮೆಣಸು
ಕರಿಮುರಂಗಳವಾಗಿ ತೋಂಟದೊಳಗೊಪ್ಪುಗುಂ.
ಆರ್ಯೆಯ್ಯೆ ಕಾನಕಲ್ಲಟಿಬಳ್ಳಿ ಎಲೆವಳ್ಳಿ
ಸೇರಿರ್ದಮರಕೆ ಗೆಣಸಿನಬಳ್ಳಿಪುದಿಸುತ್ತೆ
ಬೇರೆಬೇರೆಲ್ಲ ಫಲವಡೆದಪಂ ತೋಂಟಿಗಂ.

ಪಸಿನಡುವಮುರುಳುಂಟು ಪೊಸಬರೊಳ್ ನಗರದೊಳ್
ಪಸಿಯಕೃಷಿಯರಿಯದರ್ ನಟ್ಟೇಕೊಬಳಲ್ದಪರ್?
ಕೃಷಿಯಶ್ರಮಂ ನಡುವುದರೊಳೆ? ನಟ್ಟುದನೆಲ್ಲ
ಕೃಷವಾಗದಂತೆ ವೃದ್ಧಿಯ ಗೈವುದರೊಳಲ್ತೆ.
ಪೊಸಪೊಸತು ಜಾತಿಯಂ ಫಲವಧಿಕವೀವುವಂ
ನಸವಸಂ ಕೃಷಿಗೈದು ಕಾಲಕ್ಕೆ ಕಾಪಾಡಿ
ಪಸರಿಸಿರ್ದಾಪೊಲಂ ಸಕಲಸೌಖ್ಯಪ್ರದಂ.
ಸುಳಿವ ಮಂದಾನಿಲಂ ತಾವರೆಗೊಳಂ ಪುಗು
ತ್ತಳಿಕುಳಂಗಳ ಮಧುರ ವಾದ್ಯದೊಡನೈತಂದು
ಕಂಪನುಂ, ತಂಪನುಂ, ಕಿವಿಗಿಂಪನುಂ, ಗೈಯು
ತುಂಪಾಡುತಿರ್ಪ ಕೋಗಿಲೆದನಿಯನನುಭವಿಸೆ
ಸಂಪಾದಿಸಿರವೇಳ್ಪುದ್ಯೆ ಪುಣ್ಯಯೋಗಮಂ.

ಆವೊಲದ ಪೊರಗಳ್ಳಿ ತುಂಬುವೊಲ್ ಮೇದು ಬ
ರ್ಪಾವುಗಳ್ ಬಟ್ಟಗೆಚ್ಚಲ ಭಾರದಿಂಬಳ್ಕಿ

ಮನೆಯೆಡೆಗೆ ಮೆಲ್ಲಡಿಯ ನಿಡುತಬರೆ, ದನಗಳೆಡೆ
ಯನೆವೊಕ್ಕು ನೆಗೆಯುತ್ತೆ ಕೆಲೆಯುತ್ತೆ ಪಾಯುತ್ತೆ
ಬಿನದದಿಂ ಬರ್ಪ ಪೆರ್ಗಡಸು ಪೇರಿತ್ತುಗಳ
ಹೊಟ್ಟೆತುಂಬುತೆ ಬಕ್ಕದೋಲುರುಟುಗೊಂಡಿರಲ್
ಕಟ್ಟೆರಿತದಿಂದೆ ಕೆಮ್ಮಣ್ಮೊಗದೆ ಮೆತ್ತಿಕೊಂ
ಡಿಟ್ಟ ಸಿಂದೂರಮದು ಸಂಸ್ಕೃತಿಯ ಚಿನ್ಹೆಯೆನೆ
ಗಾಂಭೀರ್ಯಗೌರವಂ ಬೀರಿ, ದೇಹದೊಳೆರಗಿ
ಬೆಂಬಿಡದೆಂಬರ್ಪ ನೊಳವಂ ಬಡಿದು ಬಾಲದಿಂ
ದಾಕಳ್ಗಳಿಲ್ಲದೆಕ್ಕತುಳದಾಕಳಕುಳಂ,
ಮೆಲುಕಾಡಿವರ್ಪಮೆಲ್ನಡೆಯ ಪೇರೆಮ್ಮೆಗಳ್
ನೆಲಮುಟ್ಟಲಿಳಿದ ಪೆರ್ಗೆಚ್ಚಲ್ಗಳಿರೆತಲೆಯ
ನಲುಗಿ ಪೊದರಂ ಪಾಯ್ದು ಬರ್ಪುದು ಮನೋಹರಂ.
ನಾಡಿನಭಿವೃದ್ಧಿ ಗೋವ್ಗಳಸಮೃದ್ಧಿಯೊಳುಂಟು.
ನೋಡೆಗೋವಿಂಡು ಗೋವಿಂದನಿಂಕಲ್ತಪುದು
ರೂಢಿ ಗೋವಿಂಡಿನಾಧಾರದಿಂದಿರ್ಪುದಲೆ!
ಉದಯಾಸ್ತಮಾನಂಗಳುಂ ಋತುಗಳುಂಸಮಯ
ಕೊದಗುಗುಂ ಧರೆ ಸಸ್ಯಶಾಮಲಮಿವಿರ್ದೊಡಂ
ಮುದಮಿಲ್ಲ ಜನಕೇಕೆನುತ್ತೆ ನೋಳ್ಪೊಡೆ ಸಮಾ
ಜದೆ ಕುಂದು ಕೊರತೆಗಳ ನೊಳವೊಕ್ಕು ಪರಿಕಿಪುದು.
ಆಚಾರಮಿಲ್ಲ ದುರ್ವೃತ್ತಿಗಳೆ ಸಬಲರೊಳ್
ಗೋಚರಿಸದುದನೆ ನಂಬಿಸಿ ನಿವೃತ್ತಿಯಮಾರ್ಗ
ದಾಚರಣೆಯಿಂಕರ್ಮ ಶೂನ್ಯರಾಗಿಸುತಿಹರ್.
ಬೋಧನಂ ಮೋಕ್ಷಕ್ಕೆ ಸಾಧನಂ ಸಲ್ಲದಾ
ಬೋಧಕರ್ ಸಾಧಕರ್ ಮೇಣ್ ಪರಿವ್ರಾಜಕರ್
ಬುದ್ಧಿಕಾರ್ಯಕ್ಕೆಯೇಸಲ್ವ ಬೌದ್ಧರ್.   ಕ್ಷಾತ್ರ
ವೃತ್ತಿಯಂ ಕೃಶಿವೃತ್ತಿಯುಂ ಕೆಡುವೊಡಿಂತಾಯ್ತು.
ಪರದಾಸ್ಯಭಾವ ದುರ್ಭಿಕ್ಷ್ಯ ಕಷ್ಟಂಗಳವ

ತರಿಸೆ ಗೇಯುವರಮೇಣ್ ಸೈನಿಕರ ಕುಂದದಂ
ಪರಿಕಿಸಲ್ ಶ್ರಮಿಗಳುದ್ಧಾರಮುಂ ಸೈನಿಕರ
ನುರಿಪೆರ್ಚಿಸಲ್ ಕಾರ್ಯಮುಂ ಮುಖ್ಯಮರಿತರಾರ್?

ಸ್ವಾರ್ಥಲಂಪಟರಧಿಕ ಜನಮಿಂದು ದಳಗತ
ಸ್ವಾರ್ಥರನ್ಯರ್ ದೇಶಹಿತವನೇ ಕೆಡಿಸುವರ್.
ನಿರ್ಧನರ್ ನಿರ್ಬಲರ್ ನಿಸ್ಸಹಾಯಕರನಿ
ನ್ನುದ್ಧರಿಸಲೆಮ್ಮ ಸಂಸ್ಕೃತಿಯ ಪ್ರಚಾರಮಂ
ಸಾರ್ದೆಲ್ಲಜಗಕೆಪೇಳ್ವರ್ ಇಲ್ಲಮೆನಲೆಮಗೆ
ಶೋಭೆಯೋ ಕ್ಷೋಭೆಯೋ ಮನದೊಳುಂಟಾದಪ್ಪುದು?
ಜಗದೊಳಿಂತಗಣಿತಂ ತಿಳಿಯವೇಳ್ಪುದವಿರ್ದು
ಬಗೆಗರಿತವಾಗದಾ ಪುಸ್ತಕದತಿಳಿವೇಕೆ?
ಚಿಗುರೆದ್ದು ಭಾವದಿಂ ಕವಿತೆಮುಗುಳರಳಲುಂ
ಮುಗುಳದರಗುಣದೆ ಪರಿಮಳಮೆಲ್ಲ ಹರಡಲುಂ
ಸೊಗಮಾಂತು ಕಬ್ಬದೊರೆಯುಬ್ಬರಂ ಪರಿಯಲುಂ
ಜಗದನುಭವಂಬೇಕು, ತನ್ನರಿತದಿಂಕೂಡಿ.

ಲೆಕ್ಕಣಿಕೆ! ಲೆಕ್ಕಮಿಕ್ಕಿತ್ತುಕ್ಕಿ ವರ್ಣನಂ.
ಮಕ್ಕಳಾಟಮಿದೆಕ್ಕಸಕ್ಕಕಕ್ಕಸ ಕಸಂ.
ತಕ್ಕರುಂ ತಕ್ಕಮೆಂತಕ್ಕೆಂದು ತರ್ಕಿಸ
ಲ್ಕಿರ್ಕೆಯಿರೆ, ಸೊರ್ಕೆಲ್ಲ ಸಿಕ್ಕಾಗಿ ಕರ್ಕಾಗಿ
ಮುರ್ಕಾದಿರ್. ಸಿಕ್ಕುಸಿಕ್ಕಿದುಮ್ಮಿಕ್ಕದಿರ್.
ಚೊಕ್ಕಮಾತಿಂದೆ ಕಬ್ಬಂರಸದೆತುಂಬಿರ್ದು
ಸಕ್ಕರೆಯ ಬಾಯ್ಗಿಟ್ಟಬಾಲರಾನಂದದೊಲ್
ನೆಕ್ಕೆ ಜೇನೆಂತಂತೆ ಪಠಿಪಂಗೆ ಸೇರ್ದಪುದು.
ಸಾಕ್ಷರಂ ಗುಣಕೆ ನಿರ್ಮತ್ಸರದೆ ಮೆಚ್ಚುಗುಂ,
ರಾಕ್ಷಸಂ ಮತ್ಸರಿಸಿ ದುರ್ಗುಣಂ ಪುಡುಕುಗುಂ,
ವರ್ಣವೈಕಲ್ಯದಿಂ ಕಲ್ಪಿತಾರ್ಥಂಕೆಟ್ಟು

ವರ್ಣನಂ ಕಣ್ಣುಕಟ್ಟಾಗಿ ಕಾಣದೆಪೋಗೆ
ಪೂರ್ಣಪ್ರಯತ್ನಂನಿರರ್ಥವಿಂತಾಗದೊಲ್
ಕರ್ಣಕ್ಕೆರಸದೊರತೆ ಸುರಿಸೆ ವಾಗ್ದೇವತೆಯ
ವರ್ಣಿಪೆಂ, ಸಂಸ್ತುತಿಸಿ ಸಿದ್ಧಿವಡೆದಪೆನಿಂದು:
"ಮಾಣಿಕ್ಯ ಮಣಿಹಾರದಂತೆ ಪೊಳೆವೊಳೆವ ಗೀ
ರ್ವಾಣಿಯಂ ಪ್ರಾರ್ಥಿಪೆಂ, ಪ್ರಾರ್ಥಿ ಪೆಂಪಾನಹೆಂ.
ಚಾಣಕ್ಯ ಕಾವ್ಯಚಂದ್ರಂ ಪ್ರತಿಪದವರಸದೆ
ಜಾಣಿಂ ಪುರೋವೃದ್ಧಿ ಪೂರ್ಣದಿಂ ಶಾಶ್ವತಂ
ಕ್ಷೋಣಿಯೊಳಗಮೃತ ಧಾರೆಯ ನೆರೆವುತಿರ್ಪವೊಲ್
ವಾಣಿ ವಾಕ್ ಸಿದ್ಧಿಯಂ ಬುದ್ಧಿಯಂ ಕುಡಲೆನಗೆ"

ಪೂಜೆ ಯಜ್ಞಂ ತಪಂ ಮುಂತಪ್ಪ ವಿಪ್ರಂಗೆ
ಸಾಜದಾ ಕಾರ್ಯನೆಗಳದೆ ವಿಷ್ಣುಶರ್ಮಂ ಸ
ಮಾಜ ಕಾರ್ಯಕ್ಕಾಗಿ ಸುತ್ತುಗುಂ; ಮುಕ್ಕಣ್ಣ
ಮೂಜಗತ್ಪತಿ ಸುತ್ತಿದಂತೆವೊಲ್ ತ್ಯಾಗದಿಂ.
ಓಜನಿರ್ದಕ್ಷರಂ ಕಲಿಪುದಂ ಬಿಟ್ಟಿಂದು,
ರಾಜಕೀಯದೊಳನಕ್ಷರಕಾಗಿ ಪೊಣರ್ದಪಂ
ಲೋಕಸಂಗ್ರಹದೊಳಿರ್ಪಂ ಮಹಾತ್ಮಂ ದಿಟಂ
ಲೋಕಸಂಗ್ರಹಣಕಿರ್ಪಂ ಪ್ರಭು ಹಠಾಹಠಂ
ಕರ್ಮದೊಳ್ ವಿಪ್ರಂಗೆ ಸರಿಯಿಲ್ಲದನೆ? ವಿಷ್ಣು
ಶರ್ಮನಕಲಂಕ ಪ್ರಬುದ್ಧ ಶುದ್ಧಾತ್ಮಕಂ
ದುಷ್ಟನಂದನ ಸ ದಲನಂ ಸವಲನಂ ಗೈದು
ಪಟ್ಟಮಂ ಚಂದ್ರಗುಪ್ತಂಗೆ ಕಟ್ಟಲ್ಕೆ ಮೇಣ್
ಪಟ್ಟಿರ್ದ ಪಾಶವೀ ಶಕ್ತಿಯಂ ಸುಟ್ಟು ಬೇ
ಕಷ್ಟು ನಿಷ್ಟೆಯ ಪ್ರತಿಷ್ಟೆಯ ಕಟ್ಟೆ ಕಟ್ಟಲಿಂ
ಪಟ್ಟ ಕಷ್ಟ ಶ್ರಮಂಗಳ್, ಕರ್ಮಶೂನ್ಯದಾ
ನಿಷ್ಟೆ ತಪದಾ ನಿಷ್ಟೆಯೆನ್ನಿಪುದರಿಂ ಕೀಳೆ?

ವ್ಯಷ್ಟಿಗತರಂ ಸಮಷ್ಟಿಗೆ ಸತತ ವೊಲಿಸಿದುದು
ಕೆಟ್ಟ ಚಾಳಿಯೆ? ವೇದ ಬೋಧನಕೆ ಸರಿಯಲ್ತೆ?
ನ್ಯಾಯ ಧರ್ಮಂಗಳೆಂಬೆರಡು ಚಕ್ರಂ ಬಿಗಿದ
ಸ್ವಾಯತ್ತ ರಾಷ್ಟ್ರರಥಮಂ ಸಶಕ್ತನ ಪೆಗಲೊ
ಳಾಯತದೆ ಕಟ್ಟಿ 'ಹೋ' ಎಂದು ನಡೆಸುತ್ತಿರ್ಪ
ದಾಯಜ್ಞಮಿಂತು ಚಾಣಕ್ಯಂ ಸುಸೌಖ್ಯಕಂ.

ಮಗದರಾಜ್ಯಂ ಕೈಗೆ ವಂದೊಡಿನ್ನುಂ ಕೆಲರ್
ಪಗೆಗಳಿರ್ದರ್ ಕೆಡುಕನಾಗಿಸುತೆ ಪೂಣರ್ದವರ್.
ರಾಕ್ಷಸಾಮಾತ್ಯನಿರ್ಪರಸು ಮಕ್ಕಳನೆಲ್ಲ
ಮನವೊಲಿಸೆ ಯತ್ನಮಂ ಗೈಯುತುಂ ಪ್ರಜೆಗಳಂ
ಮನದೆ ವಿದ್ರೋಹದಿಂದಿರ್ದಿಲ್ಲೆ ಪೇಳ್ದು, ಮ
ತ್ತಂದು ನಂದನ ಕುಲದ ಸರ್ವಾರ್ಥ ಸಿದ್ಧಿಯಂ
ತಂದು ವನದಿಂ ರಾಜ ಪಟ್ಟಾಭಿಲಾಷೆಯಂ
ಪೊಂದಿಸುತ್ತಾಗಸಕ್ಕೇಣಿಗಟ್ಟುವ ಯತ್ನ
ದಂದದಿಂದಿರೆ ತಿಳಿದು ಮನದೆ ಚಾಣಕ್ಯನೇ
ನೆಂದಪಂ ಲೆಕ್ಕಣಿಕೆ, ಲೆಕ್ಕಿಸೆಳೆಮುಕ್ಕಳ್ಗೆ.

"ರಾಕ್ಷಸನೆ! ಮಂತ್ರಿಪುಂಗವನೆ! ಚಾಗದದೇವ!!
ಲಕ್ಷ್ಯಮೈ ನಿನ್ನ ಚರಿತಂ ಮಹಾತ್ಮಂ ನೀನೆ
ಧನಕನಕ ಬಂಧು ಬಾಂಧವರ್ಗಳಂ, ನಗರಮಂ,
ಮನಕೆ ವಿಶ್ರಾಮಮಂ, ದೇಹಕ್ಕೆ ನಿದ್ರೆಯಂ,
ತಿನಸುಣಿಸುಗಳ ಗೊಡವೆಯಂ ಬಿಟ್ಟುಕೊಟ್ಟೊಂದೆ
ಭೂಮಿಯೊಳ್ ಸ್ವಾಮಿಕಾರ್ಯಂ ಸ್ವಾಮಿಕಾರ್ಯಮಂ
ದಾವುಳ್ಳುದೆಲ್ಲಮಿನ್ನದಕೆ ಹೋಮಿಸಿದೆಯಲೆ!
ರಾಷ್ಟ್ರಕಾರ್ಯಂ ತನಗೆ, ರಾಜಕಾರ್ಯಂನಿನಗೆ.
ಶ್ರೇಷ್ಠತೆಯ ನಿರ್ಣಯಂ ಪರಿಣಾಮದಿಂದಹುದು
ತತ್ವಕ್ಕೆ ಪೂಜೆಯೋ ವ್ಯಕ್ತಿಗಾರಾಧನೆಯೊ

ಸತ್ವರಂ ಸತ್ವದಿಂ ತತ್ವನಿರ್ಣಯಮಕ್ಕೆ.
ಕೊಳುಗುಳದ ನೋಟ ಸೊಗಸೆಮಗೆ ಬಯಲಾಟದೊಳ್
ಕಳಕಳಿಕೆಯಾವಳಿಕೆ ತೂಕಡಿಕೆಗಳನೆಲ್ಲ
ಕಳೆದು ಕಣ್ಬಿಟ್ಟದಂ ಸಭೆಯೆಲ್ಲವೀಕ್ಷಿಪುದು
ಆಳಾಟದಿಂದೆ ಚತುರಂಗ ಬಲ ಕಲಕಲದೆ
ಕಾಳಗಂ ಚೆಲ್ವಾಗಿ, ಕೌತೂಹಲಂ ಬರ್ಪ
ಮೇಳದಿಂತಾಳದಿಂ ದರಸುಗಾಳಿಗವಹುದು.

ಸೋಲಗೆಲ್ಲಂಗಳಂ ತೀರ್ಪಿಂಗೆ ತರ್ಪೊಂದು
ಕಾಲಮದು ಬುದ್ಧಿಗಾಳಿಗಕೆನ್ನೊಳಿದಿರಾಗು
ತಂತ್ರಮಂತ್ರಂಗಳಿಶುಗಳ್ ಪ್ರಯೋಗಂಗೊಂಡು
ಕಾಂತಿಯಂ ಭ್ರಾಂತಿಯಂ ಜಗಕೆಲ್ಲ ಗೈದಲ್ಲಿ
ತಂತ್ರಂ ಸ್ವತಂತ್ರ ಸಾಧನಮಪ್ಪುದೆಂತೆಂದು
ಸಂತತಂ ತಿಳಿವರ್ ಭವಿಷ್ಯದರವಶ್ಯದಿಂ.

ಇಂದಾ ಮಹಾಮಂತ್ರಿಪಂ ಚಂದ್ರಗುಪ್ತ ಕೇಳ್!
ಬಂದಂ ಗಡಾ! ಪಾಟಲೀಪುತ್ರ ನಗರಕ್ಕೆ
ಕುಂದಿಯಾಸೆಟ್ಟಿ ಚಂದನ ದಾಸನಲ್ಲಿರ್ಪ
ಬಂಧುಗಳ ಕುಶಲವರಿದೈದುಗುಂ ಕಾರ್ಯಕ್ಕೆ.
ಬೇರೆ ರಾಜಕರ್ಗಳಿವನಂ ಕೂಡದಂತಲ್ಲಿ
ಕಾರ್ಯಮೆಸೆಪಾ ರಾಷ್ಟ್ರಭಕ್ತ ಜನರಿಂದಿಹರ್.
ಆರೊಲಿವರಾರ್ಪಗೆಯರಿರ್ಪರೆಂದರಿಯಲ್ಕೆ
ಬಾರದೆಯೆದುಮ್ಮಾನಮುಪಮಾನ ಮಾದಪುದು
ಜಾರಿದಾಸ್ಥಾನದಾಸ್ಥಾನದಿಂ ಬಂದನಂ
ಸೇರ್ವರಾರ್? ಕಡಿದ ನೀರಂ ಕಟ್ಟವಾಂತಪುದೆ?"

ಚಂದ್ರ—"ಬಂದನೇ ರಾಕ್ಷಸಂ ಪಾಟಲಿಗೆ? ಲೇಸಲ್ತೆ
ಬಂಧಿಸುತೆ ತರ್ಪುದೇ? ಕೊಲ್ಲಿಪುದೆ, ಗುರುದೇವ!"

ಚಾಣಕ್ಯ—ಅಂತಪ್ಪುವೆರಡು ಕಾರ್ಯಂಗಳುಂ ಲೇಸಲ್ತು
ಮಂತ್ರಿ ರಾಕ್ಷಸನೇಂ ಹಿರಣ್ಯಕಶ್ಯಪನೆ? ಮೇಣ್
ಬಸ್ಮಾಸುರನೆ? ಕೈಟಭನೆ? ರಾವಣನೆ? ಅಲ್ತು
ಮಂತ್ರವೇತ್ತ ಮಹಾತ್ಮನಸಮ ಪಂಡಿತನವಂ
ತಂತ್ರವಿದನಾದ ಪ್ರಸಿದ್ಧಿಯ ಹುತಾತ್ಮಕಂ.

ಶಾಂತಚಿತ್ತಂ ಗೈಸು ತೊಲಿಸಲುಪಕಾರಮಂ
ಸಂತೋಷದಿಂ ಗೈವನವನೊದೆವ ದನದಂತೆ.
ಓದಿರ್ಪರನ್ನೊಳ್ಳೆ ಹಾದಿಗೆಳೆವುದೆ ನೀತಿ
ಭೇದಮೇಕಲ್ಲಿ? ಪಾಮರ ಪಂಡಿತರ್ಕಳ್ಗೆ
ಹಿಂಸೆಯನಹಿಂಸೆಯಂ ಯೋಜಿಪುದು ಬಲ್ಲವಂ
ಚಿಂತಿಸದಿರದಕೊಂದು ಸಮಯ ಬಂದಪುದುಂಟು
ಇಂದು ಯೋಚಿಪ ಕಾರ್ಯಮಿನ್ನೊಂದು ಬಂದುದಾ
ಸಂದಲಕ ಸುಂದರನ ಸೇನಾನಿಯಪ್ಪ ಸೆ
ಲ್ಯೂಕಸನ ಸಿರದೆ ಭಾರತ ದಿಗ್ವಿಜಯದ ಭೂ
ತಕ್ಕೆ ಪೂವೇರಿಯಿಟ್ಟಂತೆ ತೋರ್ದಪುದಂತೆ
ಸಿಂಧೂ ಸಮೀಪಕ್ಕೆ ಮಾರ್ಬಲಂ ಸಹಿತಾಗಿ
ಬಂದೊಡವನಂ ಮಹಾಸಿಂಧುವೋಲಡ್ಡೈಸು
ಭಾರತದೆ ಪರರಾಜ್ಯಭಾರದಂಭಾರತದೆ
ಭಾರಮುಂಟಾಗೆ ಜಂಭಾರೀ ವಿಜೃಂಭದಿಂ
ಭಾರತೀಯರ ಪರಂಪರೆಯ ರಕ್ತಧ್ವಜಂ
ಕಾರದೇ ಕೆಂಗೆಂಡಮಂ ವೈರಿಕಂಪನ
ಕ್ಕಾರದೇ ಲೋಕದೊಳ್ ಬೀರದೇ ತೇಜಮಂ?
ಪಿಂದೊಂದು ಪ್ರಾಂತದರಸಾದಾ ಪುರೂರವಂ
ಹಿಂದೋಡಿಸಿಲ್ಲವೆ ವಿದೇಶಿಗಳನೀಗಳೀ
ಹಿಂದುಗಳ್ ಸರ್ವತ್ರ ಸಂಘಟಿತರಾಗಿರ್ದು
ಚಂದ್ರಗುಪ್ತನ ತೆರದೊಳಿರ್ಪ ಮುಂದಾಳ್ಗಳಿಂ

ಮಂದರಾಚಲದಂತೆ ಮಹಿಮೋನ್ನತಂಗೊಂಡ
ಭಾರತೀಯರ ತಳ್ಳಿಗೈತರ್ಪುದೆಂಬುದದು
ಮಾರಿ ಭೂಕಂಪಂಗಳಂ ಜಗಕ್ಕಾಗಿಪುದು
ವೈರ ಸಲ್ಲಂ ಸಲ್ಲಮುವರೊಳೆಂದೀ ಜಗಂ
ಕಾರುಣ್ಯಕಾಗಿ ಕೈಜೋಡಿಪಂತಾಗಿಪೊಡೆ
ವೀರಭಟಕೋಟಿಯಿಂ ಧಾಟಿಯಂ ಮೀಟಣ್ಣ"



೫

ಆಕ್ರಮಣ ವೃತ್ತಿ ಮ್ಲೇಂಛರ್ಗೆ ನಿತ್ಯದ ವೃತ್ತಿ
ಸಿಕ್ಕಲ್ಲಿ ಕೊಲೆ ಕೊಳ್ಳೆ ಕಿಚ್ಚಾಟ ಮೆಂದೆಂಬ
ದಕ್ಕದ ದುರಾಚಾರದಾ ವಿಚಾರಮನಾರ್ಯ
ಮಕ್ಕುಮಳಿವಿಗೆ ಮೂಲಮಿಕ್ಕಲ್ಲಿ ಯೋಚಿಪೊಡೆ
ರಕ್ಕಸರ್ ಸುರಪುರಕ್ಕಾಶೆಪಡುವಂದದಿಂ
ಮಿಕ್ಕಾಸೆಯೇಕೊ ಭಾರತದಾಳ್ಕೆಯೊಳ್ ಜನಕೆ?
ಪೊಕ್ಕದಂ ಪಿಡಿವುದೇಂ ಕೈ ಬಾಯಿಯಾಟಮೇಂ?
ಸಿಕ್ಕುಗೊಳಿಸಲ್ಕದೇಂ ಸಂಘಟಿತಮಿಲ್ಲವೇ?
ದೇಶಕ್ಕೆ ಬೇಕಾಗಿ ದೇಹವಿಡುವವರಿಲ್ಲ?
ಸದಸದ್ವಿವೇಕ ತೇಜೋವಂತ ಬಲವಂತ
ರೊದಗಿ ಸರ್ವಸ್ವಮಂ ಬಲಿಯಿತ್ತು ರಾಷ್ಟ್ರದ
ಭ್ಯುದಯಕ್ಕಭಿಮಾನದಿಂ ದಾನಮಪ್ಪರ ತಿಳಿಯ

ದದಕೊ ಸೆಲ್ಯೂಕಸನ ಮಾರ್ಬಲಂ ಸಟಲೇಜ
ನದಿಯ ದಡ ಸೇರ್ದತ್ತು ತಿಳಿದಿರ್ದರದನೀಚೆ
ಮೊದಲೆ ಸಿದ್ಧರ್ ಸಶಸ್ತ್ರಾಸ್ತ್ರರ್ ಸುವಿಕ್ರಮರ್
ಚಂದ್ರಗುಪ್ತನ ವೀರಭಟರದಟುತನದವರ್
ಬಂದು ನಿಂದಿರೆ, ಗ್ರೀಕ ಯೋಧರೊಂದೆಡೆ ರಾತ್ರಿ
ಯಂದಣಂದದೆ ಗುಟ್ಟಿನಿಂ ದಾಂಟಿತೊಡಗಿದರ್
ಕಿಂತು ದೋಣಿಯ ಜಳ್ಳಮುಪಶಕುನ ಪಕ್ಷಿಯೆಂ
ಬಂತೆ ನೀರೊಳ್ ಗೈವ ಶಬ್ದದಿಂದೆಮ್ಮವರ್
ಗೊಂತುಗೈದರ್ ವಿರೋಧಿಗಳ ಮಂತಣಮೆಲ್ಲ
ನದಿಯ ಮಧ್ಯಕ್ಕೆ ಬರಲಂತೆಲ್ಲ ದೋಣಿಗ
ಳ್ಗೊದವಿದಾಪತ್ತನೇವೇಳ್ವಪೆಂ! ಸುಯ್ಯೆಂದು
ರಭಸದಿಂ ಬಂದು ಬಾಣಂಗಳೆಲ್ಲಂ ನಾಂಟೆ
ಸಬುದುಮೆಲ್ಲಿಲ್ಲಮಾಯ್ತುಲ್ಲಲ್ಲಿಗೆರಗಿದೊಡೆ
ಅಚ್ಚರಿಗೆ ಚೆಚ್ಚರಂ ಕೆಚ್ಚುಳ್ಳರುಂ ಬೀಳೆ
ಪೊಚ್ಚಮೊಳಗರಿಪೆಯುಂದಂ ಪೊಂದೆ ಕಂತಿದುವು
ಪೊಚ್ಚ ಪೊಸತರಣಿ ರಾತ್ರೆಯೊಳಂ ವಿರಾಜಕುಮೆ?
ಚಂದ್ರತೇಜಂ ತರಣಿಯಿಂದಪ್ಪುದೆಂಬರೀ
ಚಂದ್ರತೇಜಂ ಪೆರ್ಚಿ ತರಣಿಗಳನೊಡೆದುದಂ
ಬಂದು ನೋಡಲಿ, ಸುಳ್ಳರಲ್ಲ ವಿಜ್ಞಾನಿಗಳ್.

ಅಂತು ಗೊಂತ್ತಿಲ್ಲ ವಾ ಬಾಣಂಗಳೆತ್ತಣಿಂ
ಕಂತಲ್ಕೆ ಬಂದುವೋ, ನೋಡದೆಯೆ ಈಡಿನೊಳ
ಗೆಂತು ನಾಂಟಿಸುಗುಮೋ ಕತ್ತಲೆಯ ಕೈಚಳಕ
ಮಂ ತಾಳ್ದರೆಂತಹರೊ ತರ್ಕಕ್ಕೆ ಸಿರ್ಕದಿ
ನ್ನಿಂತುಮಾಶ್ಚರ್ಯಮುಮಗಾಧಾದ್ಭುತಂಗಳುಂ
ಮುಂತೆ ಮಾರ್ಗಂಗಾಣದಾ ಗ್ರೀಕ ಸೆಲ್ಯೂಕ
ಸಂತಾನೆ ಕೆತ್ತಿದಲ್, ಚಾಣಕ್ಯ ತಂತ್ರದಿಂ

ಬಂತೊಂದು ಚಂದ್ರಗುಪ್ತನ ಕಡೆಯ ಕಿರಿದು ಪಡೆ
ತಂತಿಯಿಂ ಕಟ್ಟಿ ಸೆರೆಮನೆಗೆ ಕೊಂಡೊಯ್ದುದದು
ತಡೆವ ಪಡೆ ಶಬ್ದಭೇದೀ ಬಾಣಜಾಲದಿಂ
ಕಡಿವಡೆದು ಕಂತಿಪೋಗಿರ್ದ ಕಾರಣದಿಂದೆ
ಕುಡಿಯೇರ್ದ ಮೊಸೆ ಕೆಳಗಾಯ್ತು; ಸೋಲಮೆ ಆಯ್ತು.
ಕಡೆಗೆ ಗರ್ವಿಗಳಿಂಗೆ ಗೆಲ್ಲಮಾದಪುದುಂಟೆ?

ಕಪ್ಪಾದ ಕಾಲಮುಂ ತಪ್ಪಿಂಗೆ ಸಲ್ಲಮೆಂ
ದಿಪ್ಪ ನೀತಿಯ ಮನ್ನಿಪರ್ ಕೆಲರೆ ಜನರಲ್ತೆ?
ಬರ್ಪುದಾ ಕಾಲದೊಳ್ ನಿದ್ರೆ ಜಡಮಾಲಸ್ಯ
ಹೀನ ದೆಸೆಗಳ್. ಮುಂದೆ ಮಂದಿಗಳನೆಚ್ಚರಿಸಿ
ಮಾನರಕ್ಷಣೆಗಾಗಿ ಬೊಬ್ಬೆಯಿಟ್ಟಿಲ್ಲರಂ
ಮಾನವರೆ ಎನಿಪನಂ ಮುಂದಾಳ್ವ ಮುಂದಾಳೆ.
ಪೂರ್ವಾಚಲಂ ಕುಂಕುಮಂ ಚೆಲ್ಲಿ ರಂಗದೊಳ
ಪೂರ್ವಮೆಂಬನ್ನದಿಂ ಸಿಂಗರಂಗೊಂಡತ್ತು.
ಸೇರ್ವ ಸಭ್ಯರ್ ಸಮಸ್ತ ಪ್ರಾಣಿ ಸಂಕುಲಂ
ಸರ್ವ ದಿಕ್ಕಿಂ ನೆರೆದು ನಾಟಕಾರಂಭಕ್ಕೆ
ತಂತಮ್ಮ ತಾಣದಿಂ ಧ್ವನಿಗೈಯ್ಯೆ ರಂಗಾಂಬ
ರಂ ತೆರೆದುಷಾದೇವಿ ನರ್ತನಂ ಕೀರ್ತನಂ
ಮುಂತಪ್ಪ ಚೆಲ್ವಾಗೆ, ಪಂಖೆಯೆಲರೆಂಬಂತೆ
ಬಂತು ತಂಗಾಳಿ ಮಂದಂ ಸುಳಿಯಲದರಿಂದೆ
ಶಾಂತಿಯುತ್ಸಾಹಂಗಳಂ ತಂಪು ಕಂಪುಗಳೊ
ಳೆಂತಪ್ಪ ರಸಿಕರರಸಿಕರೊಳಂ ಗೈವಾಗ
ಳುಂತೆ ಮಲಗಿರ್ಪಾಲಸಂ ದರಿದ್ರಮೆ ಅಲ್ತೆ?

ಕಾಡಕೊರವರ ದುಡಿಯ ಡುಂಡುಮೊಕ್ಕಲಿಗರಾ
ಬೀಡಿನೇತದ ಪಾಡುಮಿತರರುದಯದ ರಾಗ
ಮಾಡೆ ಚಾರಣಗಾಥೆಗಳ್ ದಿಕ್ಕುದಿಕ್ಕಿನಾ

ಕೋಡಿಯಿಂದೇಳ್ವ ಶಂಖಧ್ವನಿಗಳೊಡನೊಡನೆ
ಮೂಡೆ, ಸುತ್ತಲ್ ಕುಳಿತು ವೇದದಾವೃತ್ತಿಕರು
ಮಾಡದಿಂ ಧರ್ಮಘೋಷಣೆ ಗೈವತೆರನಾಗೆ,
ಸಂಗಡಿಸಿ ಸ್ವರಭೇದವರಿದು. ವಟುಗಳ್ ಪಾಡೆ,
ಮಂಗಲಂ; ರಂಗಿನಂಗಿಯನಂಗದೊಳ್ ಧರಿಸಿ,
ರಂಗನಾಯಕನಾಗಿ ಪೂರ್ವದಿಗ್ವಧುವೊಡನೆ
ಭೃಂಗವಾದ್ಯಂ ಮೊಳಗಲೊಡ್ಡೋಲಗಂಗುಡಲ್
ಭೃಂಗವಿಲ್ಲಾಗಸದೆ ಭೃಂಗವಿನ್ನಿರ್ದೊಡಂ.
ಪ್ರಾಚೀಮುಖಾರುಣಾನುಕರಣಂ ಹಿಂದುಗಳ
ಪ್ರಾಚೀನರಾಷ್ಟ್ರಧ್ವಜಂ ಸಂಸ್ಕೃತಿಯ ರಕ್ಷೆ
ಗಂ, ಪಿಂದಣಿತಿಹಾಸಧರ್ಮಂಗಳಂ ಪೇಳ್ವ
ದೊಂದೆ ಕೇತನಮದಕ್ಕೆಂದುಂ ಜಯಂ ವಲಂ.
ಬಂದದರ ನೆರಳಲ್ಲಿ ಭವ್ಯಭಾವನೆಯಿಂದೆ
ಮುಂದಾಳ್ಗಳಿವರೆಲ್ಲ ಸಂದಣಿಸಿ ನಿಂದರಿದೊ
ಚಂದ್ರಗುಪ್ತಾದಿಗಳ್. ಸ್ವಾಭಿಮಾನದೊಳಂದಿ
ನಾಸುಪ್ರಭಾತದೊಳ್ ಭಾರತದ ಭಾಗ್ಯಮಂ
ಲೇಸಾಗಿಸಲ್ ಪೆರ್ಚಿಸಲ್ ಬದ್ಧ ಪರಿಕರರ್.
ಬಾವುಟಕ್ಕೆರಗಿ, ಯಷ್ಟಿಕ್ರಮದೆ, ಸಾಲಿಂದೆ
ಕಾವಿಶಾಟಿಗೆ ಜಯಂ ಕಾವಿದರಿನೆಮಗೆನ್ನೆ
ಬಂದನಾರ್ಯಂ ಗುಪ್ತರಾಜಕಾರ್ಯಾಚಾರ್ಯ
ನಂದದಿಂದೆಲ್ಲರಾ ವಂದನಾನಂತರಂ.
ಬಂಧನದೊಳಿರ್ಪ ಸೆಲ್ಯೂಕಸನ ಕಾಣಲ್ಕೆ,
ಮಂದಿಗಳೊಳೆಲ್ಲ ಮಂತಣಮಾಗಿ ನಿರ್ಣಯಂ
ಪೊಂದಲ್ಕೆ, ಸಕಲರುಂ ಪೊರಟರಾಕಡೆಗಾಗಿ.
ಕುಂದಿ ಸೋಲ್ದಂ ಗೆಲ್ದನಂ ಕೂಡೆ ಬಯಸುಗುಂ.
ಪಿಂದೆ ಗೆಲ್ದಂ ಸೋತನೊಪ್ಪಂದಕೆಳಸುವೀ

ಹಿಂದೂ ಜನರ ನೀತಿಯೊಂದುದಾರತ್ವಮದು
ಕುಂದದೆಂದೆಂದಿಂಗುಮಳಿಯದುಳಿಗಿಳೆಯೊಳಗೆ.
ಹಿಂದುಕುಶಪರ್ವತದ ಹಿಂದಣಿಂ ಗ್ರೀಕಜನ
ಮುಂದದಿಂದಾಳ್ಕೆಯಂ ಗೈಯುತಿರ್ಪಂತೆಯುಂ
ಮುಂದಕ್ಕವೆರಡು ರಾಷ್ಟ್ರಂಗಳುಂ ಮೈತ್ರಿಯಿಂ
ದಂದದಿಂದಿರ್ಪಂತೆ ಬಂಧು ಭಾವಂ ನೆಲಸ
ಲಂದು ಸೆಲ್ಯೂಕಸಂ ತನ್ನಣುಗಿ ಹೇಲನಳ
ಚಂದ್ರಗುಪ್ತಂಗೊಲಿದು ಮದುವೆಮಾಳ್ಪಂತೆಯುಂ
ಬಂಧುಕೃತ್ಯಕೆ ಮಹಾಸಿಂಧೂಗಜಾಳಿಗಳ
ನೊಂದು ಸಾಸಿರಮತ್ತ ಚಂದ್ರಗುಪ್ತಂಕುಡಲ್
ಮಗಳ ಬಳುವಳಿಗಾಗಿ ಕೆಲವು ಪ್ರಾಂತಂಗಳಂ
ಸೊಗಮಾಗೆ ಸೆಲ್ಯೂಕಸಂ ಕೊಟ್ಟು ರಾಯಭಾ
ರಿಗಳಮನ್ಯೋನ್ಯ ಭಾವದೊಳಿಟ್ಟು ವೈರದಾ
ರಗಳೆ ಬಾರದ ತೆರಂ ನಡೆದುಕೊಳವೇಳ್ಕೆಂದು
ಮಹಿಯೆಲ್ಲ ಮೊಪ್ಪಮುಪ್ಪೊಪ್ಪಂದ ಮೊಪ್ಪಿತ್ತು.
'ಸಹಿ': ಎನ್ನೆ ಹಸ್ತಾಕ್ಷರಮನಿತ್ತ ರಿರ್ವರುಂ
ಸಿಹಿಯಾಯ್ತನೇಕದಿನ ಮೆಲ್ಲರಿರ್ದೆ ಬಾಯ್ಗಳ್ಗೆ.
ಪರರೊಡನೆ ತನ್ನತನ ಕಳೆದು ಬೆರೆವುದೆ? ಪರರ
ಪರತನಂಗಳನೊತ್ತಿ ಭಾರತೀಯತೆ ಗೈವ
ಪಿರಿಯ ಸಾಹಸದಶಕ್ತಿಯಿರೆ ಪರಜಾತಿಯುಂ
ಕರೆದು ಬಂಧುತ್ವಕೃತ್ಯಂ ಗೈವುದೊಪ್ಪುಗುಂ
ಭರಿತ ಶಕ್ತಿಯೊಳಿರ್ದ ಪಿಂದಣರ್ ಹಿಂದುಗಳ್
ಪರದೇಶ, ಪರಜಾತಿ, ಪರಭಾಷೆಗೂಡಿಸುತೆ
ಪರಿಕಿಪೊಡೆ ಪಡೆದರಭಿವೃದ್ಧಿಯಂ. ಶುದ್ಧಿಯಂ
ನೆರೆಯಿಸುತೆ, ಬುದ್ಧಿಯಂ ಸಿದ್ಧಿಯಿಂ ಮುದ್ರಿಸುತೆ.
ಚಿರಶಾಂತಿ ಸೌಖ್ಯಂಗಳಿಂದಾಳಿ ಬಾಳಿದರ್.

ವಿಧಿಯ ಬಲ್ಮೆಯಪಾರ ಮೆಂದಪೆಂ ಲೋಕದೊಳ್
ವಿಧಿಯಿಂದೆ ಮೇಲ್ಮೆ ಕೀಳ್ಮೆಗಳಪ್ಪುದೆಲ್ಲರ್ಗೆ.
ಒರ್ಮೆ ಗುರುಕುಲದ ಕುಲಗುರುವಾಗಿ ಮೆರೆದು, ಮ
ತ್ತೊರ್ಮೆನಂದಾಸ್ಥಾನದೊಳ್ ಮಾನಗುಂದಿದಂ
ಬಂದು ಭಾರತ ಸೂತ್ರಚಾಲಕನೆ ಪಾಲಕನೆ
ಎಂದೆನ್ನಿಪ್ಪೊಡೆ ವಿಧಿಯ ಬಲ್ಮೆ ಬಣ್ಣನೆಗಳವೆ?
ಚಾಣಕ್ಯ ನಿಂದಿನಾಸ್ಥಾನಮಾನಂಗಳೆನೆ,
ಜಾಣರಸುಗಳ್ ಕಪ್ಪಕಾಣ್ಕೆಗಳನಿತ್ತು ಮಗು
ಳಾಣತಿಗೆ ಕೇಳ್ವರೀತನ ಶಿಷ್ಯನೊಳಗವಂ
ಕಾಣದಿವನಂ ಕೇಳದಿವನೊಳೇನುಂಪೇಳ
ನಿದು ವಿಧಿಯ ಬಲ್ಮೆಯಲ್ತೇ? ಜಗದೆ ರಾಕ್ಷಸಂ,
ಚದುರನಿರ್ದಂ, ನಂದರಾಜ್ಯ ಸಂಚಾಲಕಂ.
ಇಂದಾತನಂ ಪೂಜಿಸುವರಿಲ್ಲ ಲೋಕದೊಳ
ಗೊಂದು ಮಾತಂ ಸ್ವೀಕರಿಪರಿಲ್ಲ. 'ಕಾಸಿಲ್ಲ
ದಂದು ಕಲ್ಲಿಂಗೆಸಮುಮಿಲ್ಲ ಬಡವಂಗೆಡೆ'ಗ
ಳೆಂದಪ್ಪುದಿದು ವಿಧಿಯ ಬಲ್ಮೆಯಿಂದಮೆ ಅಲ್ತೆ'.

ಚಾಣಕ್ಯರಾಕ್ಷಸರೊಳೀರ್ವರುಂ ಬಲ್ಲಿದರ್.
ಮೇಣೀರ್ವರುಂ ತಂತ್ರಕುಶಲರ್. ಮಹಾತ್ಮರವ
ರೀರ್ವರುಂ ನಿಸ್ಪೃಹರ್; ರಾಷ್ಟ್ರನಿರ್ಮಾಪಕರ್.
ಸರ್ವವಿದ್ಯಾವೇತ್ತ ಚಿತ್ತರತ್ಯುತ್ತಮರ್.
ಗರ್ವಿಪ್ಪೊಡಂ ತಕ್ಕ ಬುದ್ಧಿಯನ್ನಾಂತವರೊ
ಳೊರ್ವಂಕುಟೀವಾಸದುಪ ವಾಸದಿಂ ತೋಷಿ,
ಸರ್ವವಂದ್ಯನನಿಂದ್ಯ, ನಿನ್ನೊರ್ವನಂ ಜನಂ

ಸರ್ವತ್ರದಿಂದುಣುಂಗುಗಳಿತ್ತು ಸತ್ತೊಡನೆ
ಬಿಡುವಂತೆ ಬಿಟ್ಟಿಹುದು. ನಿಷ್ಪ್ರಯೋಜಕಮೆಂದು.
ಪಿಡಿಕಡ್ಡಿ ಚೂರಂತೆ ಪಿಡಿಪುಗೆಟ್ಟಿರ್ದಪಂ
ಪಿಡಿಪಿಂಗೆ ಕತ್ತಿಕಡಿಯಲ್ಕೆ ಬಾರದೆ ಮೂಲೆ
ಪಿಡಿವಂತೆ ಮಂತ್ರಿಯಾಧಂ ವಿಧಿಯ ಬಲ್ಮೆಯಿಂ.

ಇಂತಿರಲ್ಕೊರ್ವರ್ಗೆ ಚಾಣಕ್ಯನ ಕುಟೀರಕ್ಕೆ
ಚಿಂತೆಯಿಂ ರಾಕ್ಷಸಂ ಬರೆ ಕಂಡು "ಮಹಿಮಾ, ಮ
ಹಾತ್ಮ: ಕೊಳ್ಳಾಥಿತ್ಯಮುಂ ಬಡವನಾದೆನ್ನ
ಸಂತೋಷಕೆಣೆಯಿಲ್ಲ" ಮೆನಲಾಗ ರಾಕ್ಷಸಂ:—

"ಆಚಾರ್ಯ ವಿಷ್ಣುಶರ್ಮಾ! ನಿನ್ನ ಬಳಿಗೆನಾಂ
ಬಿರ್ದುಗೊಳ್ಳಲ್ಕಲ್ತು ಸೆರೆಯಾಗೆ ಬಂದಿಹೆಂ
ಠಕ್ಕಿನಾದರವೇಕೆ? ಮಣ್ಣು ಮುಕ್ಕಿಸು ಬೇಗ"

ಚಾಣಕ್ಯ—"ಮಣ್ಣು ಮುಕ್ಕಿಪುದಲ್ತು, ಮಣ್ಣಿ ಮುಕ್ಕಿಸಲಿರ್ಪ
ನುಣ್ಣುನೀನತಿಥಿ ಯಾನರಿವೆ ಸತ್ಕಾರಮುಂ."

ರಾಕ್ಷಸ—'ಬೇಕಿಲ್ಲ.'

ಚಾಣಕ್ಯ—'ಮೇಕೆ?'

ರಾಕ್ಷಸ—"ಮನಮಿಲ್ಲ"

ಚಾಣಕ್ಯ—"ಮಿನ್ನೇತರಿಂ?"

ರಾಕ್ಷಸ—"ರಾಕ್ಷಸಂ ಪೆಸರಿನ್ನದಹುದು; ಕರ್ಮದೆ ನೀನೆ
ರಾಕ್ಷಸಂ ಕುಟಿಲಹಿಂಸಾಪ್ರಚೋದಕನೈಸೆ.
ಸುಳ್ಳ! ವಂಚಕ! ಕುಟಿಲ! ನಿಷ್ಟುರಾ! ಕಪಟಿ! ನೀ
ನೆಳ್ಳನಿತು ದಯೆಯಿಲ್ಲದೆಯೆ ಮಾಳ್ಪೆಯೇನುಮುಂ.
ನಿನ್ನ ಸೂಚನೆಗಳಿಂ ಹತ್ಯಂಗಳೆನಿತಾಯ್ತು
ಮುನ್ನ, ಮಿನ್ನೆನಿತಾಗಲಿರ್ದಪುವೊ? ಯೋಚಿಸ
ಲ್ಕೆನ್ನ ಮೈ ನಿವಿರೆದ್ದು ತಲೆತಿರುಗೆ ತೊಡಗುಗುಂ"

**ಚಾಣಕ್ಯ**—"ಶಾಂತನಾಗೈ ಮಹಾಮಂತ್ರೀ ಮಹಾತ್ಮನೆ."

**ರಾಕ್ಷಸ**—ಕ್ರಾಂತಿಕಾರಕನಿರ್ದು ಶಾಂತಿಯೊರೆವುದೆ? ಗುಳಿಗ
ನಂತೆಲ್ಲಿ ಪೆಟ್ಟನಿಡುವೆಯೊಕಂಡರಾರುಂಟು?
ನೀನೆನ್ನ ಮಿತ್ರ ಚಂದನದಾಸನಂ ಕೊಲ್ವೊ
ಡಾನೆಂತು ಶಾಂತನಿರ್ದಪುದಯ್ಯ? ರಾಜ್ಯದೊಳ್
ನಾನಾವಿಧಭಿಮತದ ಜನರೇಂವಧಾರ್ಹರೇಂ?
ಜನಕಭಿಮತ ವ್ಯಕ್ತವೃತಿಯುಂ ಸಲ್ಲದೇ?
ಕ್ಷಮೆಯಿಲ್ಲ! ಮಪರಾಧಿಗೇಂ ವಿಚಾರಣೆಯಿಲ್ಲ?

ರಕ್ತದೋಕುಳಿಯೊಂದೆ ಶಕ್ತಿಪ್ರದರ್ಶನಮೆ?
ಯುಕ್ತಮಲ್ಲದಯುಕ್ತ ಯುಕ್ತಿಯಪಿಶಾಚದಾ
ಶಕ್ತಿ, ಪಶುಶಕ್ತಿ ಯನುರಕ್ತಿಯಿನಹಿಂಸೆಯಾ
ಸಕ್ತಿಯಿಲ್ಲದೆ, ಶಾಂತಿ ನೀತಿ ಶಕ್ತನದೆಂತು?
ಸೆಟ್ಟಿಯನ್ಯಾಯಮೇನಾದತ್ತು ನಿನಗವನ
ಕಟ್ಟಿಕಾಲನ ಪೆಟ್ಟಿಗೆಗೆ ದೂಡೆ ಯೋಚಿಪೊಡೆ?

**ಚಾಣಕ್ಯ**—"ಎನಗಲ್ತು ರಾಜ್ಯಕನ್ಯಾಯಿಯಾದಂಸೆಟ್ಟಿ.
ಜನಮರಿವುದೀ ರಾಕ್ಷಸಂ ಮೌರ್ಯಸಾಮ್ರಾಜ್ಯ
ಘನ ವೃಕ್ಷದೊಳ್ ಕೊರೆವ ವಜ್ರಕೀಟಮೆಯವನ
ಮನೆಮಂದಿಗಳನೆಲ್ಲ ಮನೆಯೊಳಡಗಿಸಿದಾತ
ನಕ್ಕುರಾಜದ್ರೋಹಿಯದಕೆಮರಣಂಶಿಕ್ಷೆ
ತಕ್ಕುದೆಂಬೆಂ. ಶಾಸ್ತ್ರ ಸಮ್ಮತ ಮಿದೊಪ್ಪುವೆಂ."

**ರಾಕ್ಷಸ**—"ಅಂತಪ್ಪೊಡಿದೊ ರಾಕ್ಷಸನುಪಸ್ಥಿತನಿರ್ಪ
ನೆಂತಿಚ್ಛಿಪೆಯೊ ಮನದೊಳಂತು ನೆಗಳ್ವುದುಬೇಗ:—
ಬಂಧಿಸಾ! ಸೂಲಕೇರಿಸ, ಖಡ್ಗದಿಂದಿರಿಯ
ಮುಂದೆನಿಲ್ಲಿಸಿ ಚರ್ಮಸುಲಿಸ, ಚಿತ್ರದ ಹಿಂಸೆ
ಯಿಂದೆಯಾತನೆಗೊಳಿಸ, ನಿಷ್ಕರುಣಿ, ನಿರ್ದಯೀ!

ಕೊಂದುಕಳೆವಾ ಶೀಲಕನುಕೂಲ ನಿನಗಿಂದು
ಚಂದನಾ ದಾಸನಂ ಕೊಲ್ಲಿಸದಿರೆನಗಾಗಿ."

**ಚಾಣಕ್ಯ**—"ವತ್ಸನೇ, ಚಂದ್ರಗುಪ್ತನೆ! ಮಹಾತ್ಮಂಗೆರಗು."
ಸಚಿವಾಗ್ರಣೀ! ವೈರಿ ರೂಪದೊಳ್ ನೀನಿಲ್ಲ
ದುಚಿತಮೇ ನಿನ್ನಕೊಲೆ! ನೀನತಿಥಿ. ದೇವನೆನೆ?

**ರಾಕ್ಷಸ**—"ಆದೊಡತಿಥಿಯ ತುಷ್ಟಿಗಾಗಿ ಚಂದನದಾಸ
ನಾದರಂ ಪೊಂದಿರ್ಕೆ ಜೀವದಾನಂಗುಡೈ"

**ಚಾಣಕ್ಯ**—"ದೇವನಕ್ಕತಿಥಿ. ದೇವನ ಶೀಲಮೇ ದಾನ
ಮಾವಗಂ. ಭಿಕ್ಷುವಾದೇವನಾದಪುದುಂಟೆ?"

**ರಾಕ್ಷಸ**—"ಉಂಟು ಮಾದೇವನುಂ ಭಿಕ್ಷೆಬೇಡಿರ್ದಪಂ."

**ಚಾಣಕ್ಯ**—"ಬ್ರಹ್ಮಶಿರಗಡಿದ ದುಷ್ಕೃತ್ಯಮಿಲ್ಲಿಲ್ಲಲ್ತೆ?"

**ರಾಕ್ಷಸ**—"ದೇವಪೂಜೆಯ ಪುಷ್ಪಮೆಂದರ್ಪಿಸೆನಗವನ."

**ಚಾಣಕ್ಯ**—"ದೇವಂಗೆ ಪೂಗೊಟ್ಟು ವರವೊಂದಲಹುದುಗಡ!"

**ರಾಕ್ಷಸ**—"ರಾಕ್ಷಸನೊಳಿರ್ಪುದೆಲ್ಲಂ ಪ್ರಸ್ತುತಂವಿಪ್ರ!"

**ಚಾಣಕ್ಯ**—"ಅಂತಿರ್ಪೊಡೊಂದು ಪ್ರತಿಜ್ಞೆಯುಂ ಗೈಯೀಗ"

**ರಾಕ್ಷಸ**—"ಉಳ್ಳನ್ನೆಗಂ ಸುಳ್ಳನಾಗ ನೀ ಬ್ರಾಹ್ಮಣಂ"

**ಚಾಣಕ್ಷ**—"ಸದ್ವಿಚಾರಕ್ಷಮಾಕ್ಷಮನೆ ನೀನಕ್ಷಮನೆ?
ಉದ್ವೇಗವೇಕೆ? ಬಾಗಿದ ಚಂದ್ರನಂ ಹರಸು"

**ರಾಕ್ಷಸ**— ಚಂದ್ರಗುಪ್ತಂಗೆ ಮಂಗಲಮಕ್ಕೆ! ಚಾಣಕ್ಯ,
ಚಂದ್ರದರ್ಶನಮುಂ ಚುತುರ್ಥಿಯೊಳ್ ಗೈದಂದು
ನಿಂದೆ ನಕ್ಕುಂ ನಂದಪಕ್ಷದೊಳ್. ನೀನಂದು
ಚಂದ್ರದರ್ಶನಮುಂ ಚತುರ್ಥಿಯೊಳರುಂಧತಿಯ
ಚೆಂದವಿಾಕ್ಷಿಸುವಲ್ಲಿ ಗೈದಿರ್ದು, ನಿಚ್ಚಲುಂ
ಚಂದ್ರಪಕ್ಷದೆನಿಂದೆಯಕ್ಕು 'ನಿತ್ಯಾಚಾರ

ಮೆಂದುಂ ನಿಶೀಥಮಲ್ತೆ'ಂಬರಿಮುಗರಿತವರ್.
ಚಂದ್ರನೊಡನೆಂದುಮಿರ್ಪಾಚುಕ್ಕಿ ಚೌತಿಯೆಂ
ದೊಂದುದಿನಮಿಲ್ಲದಿರ್ಪುದೆ? ಕಿಟ್ಟಿ ಕುಂದುಗುಮೆ?
ಸಂದೇಹಮಿಲ್ಲ. ನೀಂಜೈಸಿರ್ಪೆ ಸೋತೆನಾಂ॥

ಚಾಣಕ್ಯ—"ರಾಕ್ಷಸ ಮಹಾತ್ಮ ನಿನ್ನಂ ಜೈಪರಾರುಂಟು?
ದಕ್ಷದಿಂದಿರ್ದೆನಗೆ ನಿನ್ನ ಲಭ್ಯಂಕಡೆಯ
ದೀಕ್ಷೆಯಂ ಪ್ರೇರಿಪುದು, ನೀನಜೇಯಂ ನಿನ್ನ
ದಕ್ಷರಂ ಜಯ ಮದೇಕೆನೆ ನಿನ್ನಮನಮೆಂದು
ಮಿರ್ಕುಮಾನಂದಪಕ್ಷಂ. ಪೋಪುದೆನ್ನಮನ
ಮುರ್ಕಿಯಾನಂದಪಕ್ಷಂ. ರಾಜಪೀಠದೊಳ
ಗಿರ್ಕು ಮಾನಂದಪಕ್ಷಂ ಯೋಚಿಸುತೆನೋಡಿ
ತರ್ಕಿಸುತ್ತೊರೆ ಜಯಾಪಜಯಮಾರ್ಗಾಯ್ತೆಂದು.
ಕಾನನಂ ಕರೆವುದೆನ್ನಂ ತಪಕೆ ಪೋದಪೆನ
ನೂನಗುಣಿ ಶಾಂತಿಯಿಂದಾಳ್ಕೆಯಿರ್ಪನ್ನೆಗಂ"

ಚಂದ್ರಗುಪ್ತ—"ಗುರುಗಳ್ಕೈದುವಿರೆ? ಪ್ರಚೋದನಕ್ಕೆನಗಾರೊ?"

ಚಾಣಕ್ಯ—"ಕಾಣಲ್ಕೆ ಬರ್ಪುದೆಲ್ಲಂ ಚಿರಂಸಿಗದೆಮಗೆ
ತಾಣಮುಸ್ಥಿರಮಿಲ್ಲಿ. ಸರ್ವಶಕ್ತನಪೊಂದು.
ಚಾಣಕ್ಯ ಕರ್ತವ್ಯ ಪೂರ್ತಿಯಾದತ್ತೆಂದು.'
ಮೇಣದಕೊ, ರಾಕ್ಷಸಂ ಮುಖ್ಯಮಂತ್ರಿತ್ವದೊಳ
ಗಿರ್ಪಲ್ಲಿ ನಿನ್ನ ರಾಜ್ಯದೊಳಾರ್ಗೆಬಾಧೆಯಂ
ತರ್ಪಸಾಹಸಮುಂಟು? ಸರ್ವದಾಧಾರಮಾ
ಧರ್ಮಂ. ಸಮಸ್ತಕರ್ತವ್ಯಮುಂ ತಿಳಿಪುಗದು.
ಕರ್ಮಮಂ ಫಲಕಾಗಿಯಲ್ತು ಕರ್ತವ್ಯದಾ
ಮರ್ಮಮೆಂದಾಚರಿಸು. ರಾಜಧರ್ಮಂನಿನಗೆ
ನಿರ್ಮಲಾಂತಃಕರಣದಿಂ ಬ್ರಾಹ್ಮಣರ್ಕಳೆನೆ
ಜಗಮೆಲ್ಲಮುಂ ಮರೆದು ತೋರ್ಪುದರಿನಾಚೆಯಿಹ

ಪರವಸ್ತುವಂ ಕಂಡು ಜನರನಮರಗೈರ್ಯೆ
ಜರಿಯಿಲ್ಲ ಮೆಂದಾಗಿಪೊಡೆಯೆಂತೆನುತ್ತೆ ತಪ
ದರಿತಮಂ ಪೇಳವೇಳ್ಕದಕೊಂದುಶಕ್ತಿ ತಾ
ನರಿಯದಂತಿರೆ ಸೆಳೆತವೊಳಗೊಳಗೆಗೈದಪುದು.
ಕಾರ್ಪಣ್ಯದಿಂದಲ್ಲ ಕೀರ್ತ್ಯಾಶೆವಟ್ಟಿಲ್ಲ
ಬರ್ಪಗಿರ್ದಿರ್ಪೆಂದು ಸ್ವಪ್ರೇರಣಾ ಕಾವ್ಯ
ದರ್ಪಣಂ ದರ್ಪಣಮಿದರ್ಪಣಂ ರಾಷ್ಟ್ರದೊಳ್
ಮೂರುಕಾಲಂಗಳಂ ಚಿತ್ರಿಕುಂ ಪಠಿಸಿದರ್
'ಚಾಣಕ್ಯ ತಂತ್ರ' ಮೆಂದುಂ ಕರೆಗೆ, ಜಾಣಂಗೆ.
'ಕೌಟಿಲ್ಯನರ್ಥಶಾಸ್ತ್ರಂ' ಎಂಗೆ ವಿಷಯಕ್ಕೆ.

ನಿರುತಮಾನೀಗ್ರಂಥದಿಂ ರಸಂಗಳಸುರಿಸು
ತೊರತೆಯೆಬ್ಬಿಸಿ ನಾಡಕಿಲ್ಬಿಷಂಗಳತೊಳೆದು,
ಕೊರೆತೆಗಳ್ ಜನಜೀವನಕ್ರಮದೊಳಿಲ್ಲಮೆನೆ,
'ಭರಿತ ವೈಭವದಿಂದೆ ಭಾರತಂ, ಜಗದೆಶೋ
ಭಾರತಂ, ಕೀರ್ತಿಪ್ರಭಾವಾರತಂ' ಎಂದು
ಜಯನಿನಾದಂ ಕೋಟಿಕಂಠವೊದವಿಸಲಾರ
ತಿಯನೆತ್ತಿ ರಾಷ್ಟ್ರಪುರುಷಂಗಂದು ಬಂದಿಲ್ಲಿ
ಹರಸುವೆಂ ಧರೆಗೆ. ಭದ್ರಂ ಶುಭಂ ಮಂಗಳಂ॥

